# ಸೃಜನವೇದಿ

೧

೧೫, ಎಪ್ರಿಲ್ ೧೯೮೪

# ಸೃಜನವೇದಿ

೧

೧೫, ಎಪ್ರಿಲ್ ೧೯೮೪

ಮಾದರಿ ಸಂಚಿಕೆ

ಸಂಪಾದಕರು :
ಡಾ. ಹೇಮಂತ ಕುಲಕರ್ಣಿ
ಪ್ರೊ. ಸಿದ್ಧಲಿಂಗ ಪಟ್ಟಣಶೆಟ್ಟಿ
ಶ್ರೀ ಅರವಿಂದ ನಾಡಕರ್ಣಿ

ಸೃಜನವೇದಿ ಪ್ರಕಾಶನ
೪೦೨, 'ರಿವೀರಾ', ಗಾಂಧಿಗ್ರಾಮ ರಸ್ತೆ
ಜುಹೂ, ಮುಂಬೈ — ೪೦೦ ೦೪೯

SRUJANAVEDI — A Poetry Magazine in Kannada
Published once in four months

Edited by

Dr. Hemant Kulkarni
Prof. Siddhaling Pattanshetti
Shri Aravind Nadkarni

Published by

Dr. Hemant Kulkarni
402, 'Riviera', Gandhi Gram Road,
Juhu, Bombay - 400 049

Yearly Subscription : Rs. 15/-

ಸೃಜನವೇದಿ : ವರ್ಷದಲ್ಲಿ ಮೂರು ಸಂಚಿಕೆಗಳು

ವಾರ್ಷಿಕ ಚಂದಾ : ರೂ. ೧೫·೦೦

ಸಂಪರ್ಕ ವಿಳಾಸ :

ಡಾ. ಹೇಮಂತ ಕುಲಕರ್ಣಿ
೪೦೨, 'ರಿವೀರಾ', ಗಾಂಧಿಗ್ರಾಮ ರಸ್ತೆ
ಜುಹೂ, ಮುಂಬೈ - ೪೦೦ ೦೪೯

ಪ್ರೊ. ಸಿದ್ಧಲಿಂಗ ಪಟ್ಟಣಶೆಟ್ಟಿ
ಶ್ರೀದೇವಿನಗರ, ವಿದ್ಯಾಗಿರಿ
ಧಾರವಾಡ - ೫೮೦ ೦೦೪

ಶ್ರೀ ಅರವಿಂದ ನಾಡಕರ್ಣಿ
೧೦೧, ಕೇತಾಯುನ್ ಮ್ಯಾನ್ಸನ್
ಶಹಾಜಿ ರಾಜೆ ಮಾರ್ಗ
ವಿಲೇಪಾರ್ಲೆ (ಪೂರ್ವ) ಮುಂಬೈ - ೪೦೦ ೦೫೭

# ಸೃಜನವೇದಿ - ೧ ರಲ್ಲಿ

# ಸಂಪಾದಕೀಯ

ಹಿಂಸಾಚಾರವೇ ಆಚಾರಸಂಹಿತೆಯಾಗಲಿರುವ ಇಂದಿನ ಕಾಲದಲ್ಲಿ ನಾವು ಅಂತರಂಗದಲ್ಲಿ ಅಧಿಷ್ಠಿತವಾದ ಸೃಜನಶಕ್ತಿಯನ್ನು ಹೊರಗೆ ತಳ್ಳಿ, ಯಾಂತ್ರಿಕತೆಯೇ ಪ್ರಗತಿಯ ಜೀವಾಳವೆಂದು ಅದನ್ನು ನಮ್ಮ ಜೀವನದ ಅಂಗಾಂಗದಲ್ಲಿ ತುಂಬಿ ಕೊಂಡಿದ್ದೇವೆ.

ಈಗ ವಿಜ್ಞಾನದ ಅದ್ಭುತವಾದ ಬೆಳವಣಿಗೆಯಿಂದ ಯಂತ್ರ ಮಾನವೀಯತೆಯ ಅನೇಕ ಗುಣಗಳನ್ನು ಪಡೆದಂತೆ, ಮಾನವನು ಯಂತ್ರಪ್ರಾಯವಾಗಿದ್ದಾನೆ. ಈ ಪರಿಸ್ಥಿತಿ ಅಣುಯುಗಕ್ಕೆ ಸಮರ್ಪಕವಾದ ಮನೋಭೂಮಿಯನ್ನು ಸಿದ್ಧಗೊಳಿಸಿ ಮತ್ತೊಂದು ಮಹಾಯುದ್ಧಕ್ಕೆ ಆಮಂತ್ರಣವನ್ನೇ ಕೊಡುತ್ತಿದೆಯೆಂಬುದರ ಅರಿವು ನಮಗಿಲ್ಲ. ಅಣ್ವಸ್ತ್ರಗಳ ಯುದ್ಧವೆಂದರೆ ಸಂಪೂರ್ಣ ಸರ್ವನಾಶವೆಂಬುದನ್ನು ವಿಜ್ಞಾನಿಗಳು ಹೇಳುತ್ತಿದ್ದರೂ ಸಾಮಾನ್ಯ ಜನತೆಯ ಮನಸ್ಸನ್ನು ಅದು ಇನ್ನೂ ಕೆಣಕಿದಂತೆ ತೋರುವದಿಲ್ಲ.

ಅಣ್ವಸ್ತ್ರಗಳ ನಿರ್ಮಿತಿ ವಿಜ್ಞಾನದ ಒಂದು ಪರಿಣತಿಯೆಂದು ಒಪ್ಪಬೇಕಾಗುತ್ತದೆ. ಇದು ನಿಜವಾಗಿ ನೋಡಿದರೆ ನಮ್ಮ ಬುದ್ಧಿಯ ಈ ಪ್ರಖರತೆ ಭಾವನೆಯನ್ನು ಕಡೆಗಣಿಸುತ್ತದೆ. ಅಬಲೆಯರ ಅಸ್ತ್ರವೆಂದು ಅದನ್ನು ನಾವು ಹೀಯಾಳಿಸುತ್ತೇವೆ. ಇದು ನಮ್ಮ ದುರ್ದೈವ. ಅಗಣಿತವಾದ ಯಂತ್ರಗಳನ್ನು ನಾವು ನಿರ್ಮಿಸಿದರೂ ಸುಖ-ಶಾಂತಿಯ ಮಂತ್ರವನ್ನು ನಾವಿನ್ನೂ ಕಂಡುಕೊಂಡಿಲ್ಲ. ಭಾವಜೀವನದ ಬೆಳವಣಿಗೆಯೇ ಸೃಜನಶಕ್ತಿಯ ಮುಖ್ಯ ಪ್ರಾಣವೆಂಬುದನ್ನು ನಾವು ತಿಳಿದುಕೊಳ್ಳಬೇಕು.

ಸಂಸ್ಕೃಜಕ ಚೈತನ್ಯವೇ ಆತ್ಮದ ಮುಖ್ಯ ಗುಣ ವಿಜ್ಞಾನದ ವೃದ್ಧಿಗೂ ಈ ಚೈತನ್ಯದ ಆವಶ್ಯಕತೆಯಿದೆಯೆಂದು ಅನೇಕರು ತಿಳಿಯಪಡಿಸುತ್ತಾರೆ ಆದರೆ ಅದು ಹಿಂಸೆಯ ಸಾಧನವಾಗಿ, ಕೊಲ್ಲುವ ಕಲ್ಪಕತೆಯಾಗಲಿದೆಯೆಂಬುದನ್ನು ನಾವು ಮರೆಯಕೂಡದು.

ನಮ್ಮ ಸೃಜನಶಕ್ತಿ ಶಾಂತಿಯ ಮಾರ್ಗವನ್ನು ಹಿಡಿಯಬೇಕು. ಅದು ಸಾಹಿತ್ಯ ಸಂಸ್ಕೃತಿ ಕಲೆಗಳಿಗೆ ಮೂಲೆಗಲ್ಲಾಗಿದೆಯೆಂಬುದು ನಮಗೆ ಮನದಟ್ಟಾಗಬೇಕು. ಇದು ನಿಜವಾಗಿ ನೋಡಿದರೆ ಎಲ್ಲ ಮಾನವರಿಗೂ ದೊರೆತ ದಿವ್ಯತ್ವದ ಕಾಣಿಕೆ. ಅದನ್ನು ಸಂಪನ್ನಗೊಳಿಸುವುದೇ ನಮ್ಮ ಶಿಕ್ಷಣದ ಮುಖ್ಯ ಉದ್ದೇಶವಾಗಿರಬೇಕು. ನಮ್ಮ ದೈನಂದಿನ ಜೀವನದಲ್ಲಿ ಅದಕ್ಕೆ ಕೇಂದ್ರಸ್ಥಾನ ದೊರೆಯಬೇಕು.

ಸಂಸೃಜಕ ಚೈತನ್ಯದ ಬಹಿರಂಗದ ಒಂದು ರೂಪವೆಂದರೆ ಕಾವ್ಯ. ಅದಕ್ಕೊಂದು ಒಳ್ಳೆಯ ವೇದಿಕೆಯನ್ನು ಕಲ್ಪಿಸುವುದೇ ನಮ್ಮ ಉದ್ದೇಶ. ಎಲ್ಲೆಲ್ಲಿ ಈ ಚೈತನ್ಯ ರೂಪ ತಾಳಿ ನಿಲ್ಲುವುದೋ ಅದನ್ನು ಗುರುತಿಸಿ, ಅಭ್ಯಸಿಸಿ, ವಿಶ್ಲೇಷಿಸಿ, ಅದನ್ನು ನಮ್ಮ ಕಾವ್ಯ ಜೀವನದಲ್ಲಿ ತಂದುಕೊಟ್ಟು, ಕನ್ನಡ ಸಂಪನ್ನವಾಗುವಂತೆ ಮಾಡುವುದೇ ನಮ್ಮ ಪ್ರಯತ್ನವಾದೀತು. ಇದರ ಬೆಳವಣಿಗೆಗೆ ಆವಶ್ಯಕವಾದ ವಿಮರ್ಶೆಯ ತತ್ವಸಾಧನೆಗಳನ್ನು ಹದಗೊಳಿಸಿ ಕಾವ್ಯನಿರ್ಮಿತಿಗೆ ಮಾರ್ಗದರ್ಶನವಾಗುವಂತೆ ನಾವು ಪ್ರಯತ್ನಶೀಲರಾಗುವೆವು.

ಕಾವ್ಯ ಹಾಗೂ ಕಾವ್ಯ ವಿಮರ್ಶೆಗೆ ಮೀಸಲಾದ ಈ ಪತ್ರಿಕೆಯನ್ನು ನಾವು ತುಂಬ ಆಶೆ ಉತ್ಸಾಹಗಳಿಂದ ಪ್ರಾರಂಭಿಸಿದ್ದೇವೆ ಇದರ ಪ್ರಥಮ ಸಂಚಿಕೆ ೧೫ನೇ ಎಪ್ರಿಲ್, ೧೯೭೪ರಂದು ಸಿದ್ಧವಾಗಿ ಪ್ರಕಟವಾಗುತ್ತಿದೆ. ಇದನ್ನು ಡೆಮಿ ಆಕಾರದಲ್ಲಿ ೮೦ ಪುಟಗಳ ಗಾತ್ರದಲ್ಲಿ ನಾಲ್ಕು ತಿಂಗಳಿಗೊಮ್ಮೆ ಪ್ರಕಟಿಸಲಾಗುವುದು. ವಾರ್ಷಿಕ ಚಂದಾ ರೂ. ೧೫/- ಮಾತ್ರ.

ಇಲ್ಲಿ ಕಾವ್ಯದ ನಾವೀನ್ಯತೆಗೆ ಪ್ರಾಧಾನ್ಯ ಕೊಡಲಾಗುವುದು; ವಿಷಯ-ವಿಧಾನ, ಉಪಮೆ-ಪ್ರತಿಮೆಗಳಲ್ಲಿ ಹೊಸತನವನ್ನು ಅಪೇಕ್ಷಿಸಲಾಗುವುದು; ಅಮೂರ್ತವಾದ ಭಾವ ವಿಚಾರಗಳಿಗಿಂತ ಹೆಚ್ಚಾಗಿ ತಮ್ಮ ಕೃತಿಯ ಎಲ್ಲ ಅಂಗಗಳಿಗೂ ಮೂರ್ತಸ್ವರೂಪವನ್ನು ಕೊಡಬೇಕೆಂಬುದು ಸಂಪಾದಕರ ಆಗ್ರಹ.

ಇಲ್ಲಿ ಕಾವ್ಯದ ತಾತ್ವಿಕ, ಐತಿಹಾಸಿಕ, ತಾಂತ್ರಿಕ ಮುಂತಾದ ಸಮಗ್ರ ಅಂಶಗಳ ವಿಮರ್ಶೆಯನ್ನು ಮಾಡಲಾಗುವದು.

ಪ್ರಕಟವಾದ ಕಾವ್ಯ ಸಂಗ್ರಹ ಹಾಗೂ ಕಾವ್ಯವಿಮರ್ಶೆಗಳಿಂದ ಆಯ್ದ ಕೃತಿಗಳ ಸಮೀಕ್ಷೆ ಇಲ್ಲಿ ಮಾಡಲಾಗುವದು. ಆಸ್ಥೆಯುಳ್ಳವರು ತಮ್ಮ ಕೃತಿಯ ಎರಡೆರಡು ಪ್ರತಿಗಳನ್ನು ಕಳಿಸಬಹುದು.

ಬೇರೆ ಬೇರೆ ಭಾಷೆಗಳಲ್ಲಿ ಉತ್ತಮವೆಂದೆನಿಸಿದ ಕಾವ್ಯ ಕೃತಿಗಳನ್ನು ಅನುವಾದಿಸಿ ಕನ್ನಡಿಗರೆದುರು ಆದರ್ಶ ಮಾದರಿಗಳನ್ನು ವಿಶ್ಲೇಷಣ ಸಮೇತವಾಗಿ ಕೊಡಲಾಗುವದು.

ಸೃಜನವೇದಿ : ೧೫, ಎಪ್ರಿಲ್ ೧೯೭೪ : ೫

ಕಾವ್ಯ ಒಂದು ಅಂತರ್‌ರಾಷ್ಟ್ರೀಯ ಸೃಜನಕಲೆ ಎಂಬ ನಂಬುಗೆಯಿಂದ ಜಗತ್ತಿನ ಬೇರೆ ಬೇರೆ ಭಾಷೆಗಳಲ್ಲಿ ನಡೆವ ಪ್ರಯೋಗಗಳನ್ನು ಓದುಗರೆದುರು ಇಡುವ ಪ್ರಯತ್ನವನ್ನು ಈ ಪತ್ರಿಕೆ ಮಾಡುವದು.

ಗದ್ಯ ಪ್ರಕಾರಗಳ ವಿಮರ್ಶಾತ್ಮಕ ಲೇಖನಗಳಿಗೂ ನಿರ್ದಿಷ್ಟ ಸ್ಥಳ ನೀಡಲು ಮುಂದೆ ಹೊಳಹು ಹಾಕಿಕೊಳ್ಳಲಿದ್ದೇವೆ.

ವಿವಿಧ ಸ್ಥಳಗಳಲ್ಲಿರುವ ರಸಿಕರಾದ ಕನ್ನಡಿಗರು ಈ ಪತ್ರಿಕೆಯನ್ನು ಮುಕ್ತ ಮನಸ್ಸಿನಿಂದ ಸ್ವಾಗತಿಸುವರೆಂದು ನಂಬಿದ್ದೇವೆ.

ಕಾವ್ಯಪ್ರೇಮಿಗಳು ಚಂದಾದಾರರಾಗಿಯೂ ಸಹಕರಿಸಬೇಕಾಗಿ ವಿನಂತಿಸುತ್ತೇವೆ.

ಯಾಂತ್ರಿಕತೆಯ ಇಂದಿನ ಅರಣ್ಯದಲ್ಲಿ, ಹಿಂಸಾಚಾರದ ಕಗ್ಗತ್ತಲಲ್ಲಿ ನಮ್ಮ ಪತ್ರಿಕೆ ಒಂದು ಮಿನುಗು ದೀಪವಾಗಿ ನಿಲ್ಲಲಿ.

ಹೇಮಂತ ಕುಲಕರ್ಣಿ
ಸಿದ್ಧಲಿಂಗ ಪಟ್ಟಣಶೆಟ್ಟಿ
ಅರವಿಂದ ನಾಡಕರ್ಣಿ

೧೫, ಎಪ್ರಿಲ್ ೧೯೮೪

# ಶುಭ ಹಾರೈಕೆ

" I am delighted that you are thinking of bringing out a Kannada Poetry magazine. There is a great need for such a magazine today, publishing poetry without colour; without shirting black, pink or red; without religion without philosophising; without grinding axes; in short without anything except pure experience which has been bold in the alembic of our consciousness. The world is dying for a publication of this kind, which goes by pure achievement and not through labels of any kind. You will have all my blessings and my fullest support for a venture of this kind. "

ಡಾ. ವಿ. ಕೆ. ಗೋಕಾಕ

" ತಾವೂ ತಮ್ಮ ಮಿತ್ರರೂ 'ಸೃಜನವೇದಿ' ಎಂಬ ಪತ್ರಿಕೆಯನ್ನು ನಾಲ್ಕು ತಿಂಗಳಿಗೊಮ್ಮೆ ಪ್ರಕಟಿಸಬೇಕೆಂಬುದಾಗಿ ನಿಶ್ಚಯಿಸಿರುವ ವಿಷಯ ತಿಳಿದು ಸಂತೋಷವಾಯಿತು. ಹೊಸ ಕಾವ್ಯ ಪದ್ಧತಿ ಬಡ ಜನರ ದುಃಖದಲ್ಲಿ ದೈವುಳ್ಳವರು ರಮಿಸುತ್ತಿರುವಂತೆ ಕಾಣುತ್ತದೆ. ತಮ್ಮ ಹೊಸ ಪತ್ರಿಕೆ ಆದಷ್ಟು ಮಟ್ಟಿಗೆ Positive and Conservative of Values ಆಗಬೇಕೆಂಬುದು ನನ್ನ ಆಶಯ.... ನಿಮ್ಮ ಪತ್ರಿಕೆಗೆ ಯಶ ಕೋರುತ್ತೇನೆ. "

ಪು. ತಿ. ನ.

ನನಗೆ ತುಂಬ ಆಪ್ತರೂ ಸ್ನೇಹಿತರೂ ಆಗಿರುವ ಡಾ. ಹೇಮಂತ ಕುಲಕರ್ಣಿ, ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ಅರವಿಂದ ನಾಡಕರ್ಣಿ ಇವರು 'ಸೃಜನವೇದಿ' ಎಂಬ ಪತ್ರಿಕೆಯನ್ನು ಸಂಪಾದಿಸಿ ಪ್ರಕಟಿಸುವ ನಿರ್ಧಾರವನ್ನು ತಿಳಿದು ಸಂತೋಷವಾಯಿತು, ಸ್ನೇಹಿತರಿಗೆ ಬರಬಹುದಾದ ತೊಂದರೆಗಳನ್ನು ಊಹಿಸಿ ಭಾರೀ ಕಳವಳವೂ ಆಯಿತು. ಕಾವ್ಯದ ಬಗ್ಗೆ, ಅದೂ ಆಧುನಿಕ ಕಾವ್ಯದ ವೈವಿಧ್ಯದ ಬಗ್ಗೆ ಅಧ್ಯಯನ ನಡೆಸುವ ಈ ಕೆಲಸ ತುಂಬ ಸ್ವಾಗತಾರ್ಹವಾದದ್ದು. ಆದರೆ ಇಂಥ ಪತ್ರಿಕೆ ನಡೆಸುತ್ತ ಬಂದು ಅದರ ನಾನಾಮುಖವಾದ ತೊಂದರೆಗಳನ್ನು ಅನುಭವಿಸಿದ ನನಗೆ ಕೊಂಚ ಕಳವಳವೂ ಆಯಿತು. ಆದರೆ ಈ ಒಳ್ಳೆಯ ಕೆಲಸ ನಿರ್ವಿಘ್ನವಾಗಿ ನೇರವೇರಲಿ ಎಂದು ಹಾರೈಸದೆ ಬೇರೇನು ಮಾಡಲಿ? "ಶುಭಾಸ್ತೇ ಪಂಥಾನಃ" ಎಂದು ಹೃತ್ಪೂರ್ವಕವಾಗಿ ಹಾರೈಸುವುದಲ್ಲದೆ ಇವರ ಈ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ನನ್ನ ಕೈಲಾದಷ್ಟು ನೆರವು ನೀಡುವೆನೆಂದು ಆಶ್ವಾಸನೆ ಕೂಡ ಕೊಡುತ್ತೇನೆ.

ಎಂ. ಗೋಪಾಲಕೃಷ್ಣ ಅಡಿಗ

ವಿ. ಜಿ. ಭಟ್ಟ

## ಮೂರು ಮದುಗವನಗಳು

### ೧. ಕಾಂತನ ಮದುವೆ*

ನಿನ್ನಲ್ಲಿ ನನಗೆ ಬಲು ಪ್ರೀತಿಯುಂಟು
ಆಗುವೆಯ ನನ್ನ ಮದುವೆ ?
ಎದೆ ತುಂಬಿ ಬಂದು ಕೇಳಿದಳು ಅವನ
ಬಲು ಮುಗ್ಧ. ಚೆಲುವೆ, ವಧುವೇ.

ಕಾಂತ ಬಲು ಶಾಂತ, ಸದಾ ಏಕಾಂತ
ಕುಳಿತು ಚಿಂತಿಸುವ ಘನಾತತ್ವಜ್ಞಾನಿ
ನೋಡೋಣ, ಕೊಂಚ ಯೋಚಿಸುವೆ ಅಂತ
ಹೇಳಿದನು ಸಾವಧಾನಿ

ಎಣಿಸುತ್ತ ಕುಳಿತ ಕೆಡಕು ಮತ್ತೊಳಿತ
ಮದುವೇಯ ದುಃಕ್ಕ, ಹರುಷ
ಎಷ್ಟೆಂದರೂನು ಅವನಲ್ಲವೇನು
ಘನ ತತ್ವ ಜ್ಞಾನಿ ಪುರುಷ ?
ಸುಕ ದುಃಕ್ಕದೊಂದು ಮಾರುದ್ದ ಪಟ್ಟಿ
ಅವ ಬರೆದ ಮೂರು ವರುಷ

ಲೆಕ್ಕ ಮಾಡಿದನು ದುಃಕ್ಕದಾಯಿತಲ
ಮೂರು ನೂರು ಸಂಕೆ
ಸುಕವು ಮೂರುನೂರೊಂದು ಆಗೆ
ಇನ್ನೇಕೆ ಅವಗೆ ಶಂಕೆ ?

---

* Immanuel Kant ನ ಕತೆ

ಘನ ತತ್ವಜ್ಞಾನಿ, ಬಲು ಸಾವಧಾನಿ
ಏನೂನು ಮಾಡ ದುಡುಕಿ
ಮೂರು ವರುಷಗಳ ಹಿಂದೆ ಪ್ರೀತಿಸಿಸಿದ
ಮುಗುದೆ ಮನೆಯ ಹುಡುಕಿ-
ಹೋಗಿ ಮುಟ್ಟಿದನು, ಮೆಲ್ಲ ತಟ್ಟಿದನು
ಬಾಗಿಲೂ ಮನೆಯ ಕಿಡಕಿ

ಮುಗುದೆ ತಂದೆ ಬಾಗಿಲನು ತೆರೆದು
ಸ್ವಾಗತಿಸಿ ಕರೆದ ಒಳಗೆ
ಕಾಂತ ಹೇಳಿದನು ಬಂದ ಕಾರಣವ
ನಡುಗುವಂತೆ ಚಳಿಗೆ !

ಮುಗುದೆ ತಂದೆ ಹೇಳಿದನು ನಕ್ಕು
ತಡವಾಗಿ ಬಂದೆ ತರುಣಾ
ಇವ ಹೆಬಗನೆಂದು ಅವನರಿತುಕೊಂಡು
ಮಾಡಿತೋ ಏನೊ ಕರುಣಾ

ನನ್ನ ಮಗಳ ಶುಭ ಲಗ್ನವಾಯ್ತು
ಆಗಿಹಳು ಈಗ ತಾಯಿ
ಘನತತ್ವಜ್ಞಾನಿ, ಬಲು ಸಾವಧಾನಿ
ಆಽಽ ಎಂದು ತೆರೆದ ಬಾಯಿ

ಆ ಕಾಂತ ಶಾಂತ ಕೊನೆತನಕ ನಿಂತ
ಆಗಿಯೇ ಬ್ರಹ್ಮಚಾರಿ
ಘನ ತತ್ವಜ್ಞಾನಿ, ಬಲು ಸಾವಧಾನಿ
ಇದು ಅವನು ಹಿಡಿದ ದಾರಿ

ಪುಣ್ಯಕ್ಕೆ ಅವಳು ಮುದಿ ಮುದೀ ಅಜ್ಜಿ
ಆದಮೇಲೇನೆ ಅತ್ತ
ಅವಳ ಮನೆ ಹುಡುಕಿ ಬಾಗಿಲಾ ಜಜ್ಜಿ
ಹೊಡೆದಿಲ್ಲ ಅಲ್ಲೆ ಖೋತಾ !



# ೨. ಹಿಟ್ಲರನ ಮದುವೆ

ಹಿಟ್ಲರ ವೀರನು ನಂಬನು ಯಾರನು
ಹೆಣ್ಣನಂತು ತುಸುವೂ
ಪ್ರೇಮ ಗೀಮಂಗಳ ಹೆಸರೂ ಆಗದು
ಅಂತಹ ನರಪಶುವೂ

ಹಲವು ಹೆಣ್ಣುಗಳ ಭೋಗಿಸಿದ್ದರೂ
ತನ್ನ ಕೋಣೆಯೊಳಗೆ-
ಮಲಗಲು ಸಂಶಯ ಪಿಶಾಚಿ ಎಂದೂ
ಯಾರಿಗು ಬಿಡ ಗಳಿಗೆ

ತನ್ನ ಗುಟ್ಟು ಏನಾದರು ಕದ್ದರೆ
ತನ್ನನೆ ಕೊಂದರೆ ಎಂಬ
ಸಂದೇಹವು ಕಾಡಿತ್ತು ಆತನನು
ಅನಲಾರೆವು ಅವ ಹುಂಬ

ಬರ್ಲಿನ್ ನಗರಕೆ ಬಾಂಬು ಬೀಳೆ ಅವ
ಸರ್ವನಾಶ ಕಂಡ
ನಡುರಾತ್ರಿಯಲೇ ದೂತರ ಕಳಿಸಿದ
ಪುರೋಹಿತನು ಬಂದ

ಹತ್ತು ವರ್ಷಗಳ ಹಿಂದಿನ ಪ್ರೇಯಸಿ
ಮದುವೆ ಮಾಡಿಕೊಂಡ
ಮರುಗಳಿಗೆಯಲೇ ಪಿಸ್ತೂಲ್ ಹಾರಿಸಿ
ಆ ಮಡದಿಯ ಕೊಂದ

ತಾನೂ ಕೂಡಲೆ ತನ್ನೆದೆಗೂ ಅವ
ಹಾಕಿ ಕೋವಿ ಗುಂಡ
ಮಡದಿಯ ಬೆನ್ನಿಗೆ ತಾನೂ ಹೋದನು
ಮುಕ್ತಿ ಪಡೆದ ಚೆಂದ । ನೋಡಿರಿ
ಅವನ ಮುಕ್ತ ಛಂದ

ಸೃಜನವೇದಿ ; ೧೫, ಏಪ್ರಿಲ್ ೧೯೮೪ | ೧೧

ಅಂತಹ ಪ್ರಾಣಿಗೆ ಮದುವೆಯು ಶಿವನೇ
ಏತಕೆ ಬೇಕಿತ್ತು?
ಊಹಿಸಲಾರೆವು ಹಲವು ವರ್ಷಗಳು
ಸಂದರು ಅವ ಸತ್ತು.



## ೩. ಮಿತ್ರನ ಗುಟ್ಟು

ಒಬ್ಬಳು ಇದ್ದಳು ಬಹಳೇ ಸುಂದರಿ
ಕಡು ಬಡವೆಯು ಅವಳು
ಇನ್ನೊಬ್ಬಳು ಬಲು ಕುರೂಪಿಯಾದರು
ಘನ ಶ್ರೀಮಂತನ ಮಗಳು । ಆತನ
ಒಂದೇ ಸಂತತಿ ಮಗಳು

ಒಬ್ಬಳು ಶ್ರೀಮಂತಳು ಇನ್ನೊಬ್ಬಳು
ತೀರಾ ತೀರಾ ಬಡವೆ
ಯಾರನು ಆರಿಸಿ ಮದುವೆಯಾಗುವದು
ಈ ಇಬ್ಬರ ನಡುವೆ?

ಯೋಚಿಸಿ ಏನೂ ಹೊಳೆಯದೆ ಆತನು
ಆತ್ಮೀಯನ ಹತ್ರ
ಸಲಹೆ ಕೇಳಿದನು–ಇಡಿಯ ವಾರವೂ
ಯೋಚಿಸಿ ಹೇಳಿದ ಮಿತ್ರ

ಅಂತಹ ಸುಂದರಿ ಬಿಟ್ಟರೆ ಸಿಗುವಳೆ
ಸುಂದರ ಹುಡುಗಿಯು ಮತ್ತೆ?
ಕೂಡಲೆ ಆವಳನು ಮದುವೆಯಾಗಿ ಬಿಡು
ಯೋಜನೆ ಮಾಡದೆ ಕತ್ತೆ । ತುಸುವೂ
ಯೋಚಿಸದೇನೇ ಕತ್ತೆ

ನನ್ನಲಿ ಕೊಟ್ಟಿರು ಆ ಕುರೂಪಿ ಶ್ರೀ-
ಮಂತಳ ಹೆಸರೂ ಪತ್ತೆ

ಕೆಲವೇ ದಿನದಲಿ ಆ ಹಳೆ ಮಿತ್ರನು
ಏನು ಮಾಡಿದನು ಗೊತ್ತೇ ?

ಶ್ರೀ ರಜನೀಶನ ಕಿವಿಯಲಿ ಹೇಳಿದ
ತನ್ನ ಕುಶಲ ಗುಟ್ಟು
"ಮದುವೆಯಾದೆ ಶ್ರೀಮಂತ ಕುರೂಪಿಗೆ
ಧಾರೆಯೆರೆದು ಕೊಟ್ಟು। ನನ್ನನು ನಾನೇ
ಧಾರೆಯೆರೆದು ಕೊಟ್ಟು."



ಸೃಜನವೇದಿ : ೧೫, ಎಪ್ರಿಲ್ ೧೯೮೪ : ೧೪

ಅರವಿಂದ ನಾಡಕರ್ಣಿ

# ಕಾವ್ಯವಿಮರ್ಶೆಯ ಗೊಂದಲಪುರ

ಕಾವ್ಯನಿರ್ಮಿತಿ ಹುಲುಸಾಗಿ ಬೆಳೆದಂತೆ ಕಾವ್ಯವಿಮರ್ಶೆ ಸರಿಸಮಾನವಾಗಿ ಬೆಳೆದಂತಿಲ್ಲ. ಬಂದಂಥವುಗಳಲ್ಲಿ ಚರ್ವಿತಚರ್ವಣವೇ ಹೆಚ್ಚು 'ಹೊಸ ಕಾವ್ಯದ ಮುನ್ನೆಲೆ' (೧), (೨). ಇಂಥ ಪ್ರಯತ್ನಗಳು ಅನೇಕ ಉತ್ತಮ ಕವಿಗಳ ಬಗ್ಗೂ ಇನ್ನೂ ಆಗಬೇಕಾದ ಅವಶ್ಯಕತೆ ಇದೆ. ನವ್ಯ ಕಾವ್ಯ ಬಂದರೂ ನವ್ಯ ವಿಮರ್ಶೆಯ ವಿಧಾನ 'ಆಕಾರನಿಷ್ಠ' (Formalistic) ಆಗಿಯೇ ಇರುವದು ಶೋಚನೀಯ. ನೀತಿಪರ (Moralistic), ಸಮಾಜಶಾಸ್ತ್ರೀಯ, ಮಾನಸಶಾಸ್ತ್ರೀಯ, ಪುರಾಣ ರೂಪನಿಷ್ಠ (Mythical or Archetypal) ಈ ದೃಷ್ಟಿಕೋನದಿಂದಲೂ ಕಾವ್ಯದ ಅಭ್ಯಾಸವಾದರೆ ಅದು ಸಾರ್ಥಕ ವಿಮರ್ಶೆಯಾದೀತು.

ಈ ಆಕಾರನಿಷ್ಠ ಪ್ರವೇಶದ ವಿಮರ್ಶೆಯಲ್ಲೂ ಸಾಕಷ್ಟು ಗೊಂದಲ ಕಾಣಬಹುದು. ಇಂದು ವಿಮರ್ಶಾಲೇಖನ ಬರೆಯುವವರು ಸಾಕಷ್ಟಿದ್ದರೂ ಕಾವ್ಯದ ಮೂಲಭೂತ ಅಂಶಗಳನ್ನು ಮರೆತು ಬರೆಯುವದೂ ಉಂಟು. ಕೆಲವರಿಗೆ ಅದರ ಅರಿವಾದರೂ ಇದೆಯೇ ಎಂಬ ಸಂದೇಹ ಒಮ್ಮೊಮ್ಮೆ ಆಗುವದೂ ಉಂಟು.

ಮೊದಲನೇ ಗೊಂದಲ ವಿಮರ್ಶೆಯಲ್ಲಿ ಬಳಸಿದ ಪದಗಳಲ್ಲೇ ಎಂಬುದು. ಉದಾ: ಸಂಕೇತ ಎಂಬ ಶಬ್ದ ಪ್ರತೀಕ ಎಂಬಂಥ ಅರ್ಥದಲ್ಲಿ ಬಳಸಲ್ಪಡುತ್ತಿದೆ. ಹಾಗಾದರೆ 'Sign' ಎಂಬ ಶಬ್ದಕ್ಕೆ ಸರಿಸಮಾನ ಶಬ್ದ ಯಾವದು ? ಇದಕ್ಕೆ ಮಹತ್ವ ಬರುವದು ಇಂದಿನ ವಿಮರ್ಶೆ ಹೆಚ್ಚಾಗಿ ಪಾಶ್ಚಾತ್ಯ ವಿಮರ್ಶಾತತ್ವ ಅನುಸರಿಸುವದರಿಂದ ಹಾಗೂ ಪಾಶ್ಚಾತ್ಯರಲ್ಲಿ ಸಂಕೇತ-ಪ್ರತಿಮೆ-ಪ್ರತೀಕ (Sign-Image-Symbol) ಇವುಗಳಲ್ಲಿಯ ಅಂತರ ಸ್ಪಷ್ಟವಾಗಿ ಕಾಣುವದರಿಂದ. ಇನ್ನು ಪ್ರತಿಮೆಗಳಲ್ಲಿಯ ಭೇದ, ಧ್ವನಿ (ವ್ಯಂಗ್ಯ) ದಲ್ಲಿಯ ಭೇದ ಇತ್ಯಾದಿ ಸ್ಪಷ್ಟವಾಗಿ ಪ್ರತ್ಯೇಕಿಸಿದ್ದೂ ಕಡಿಮೆ. ಈ ಪದಗಳ ಅರ್ಥಕೋಶ ಬೆಂಗಳೂರು ವಿದ್ಯಾಪೀಠದವರು ಪ್ರಕಟಿಸಿ ಸ್ತುತ್ಯಕಾರ್ಯಮಾಡಿದರೂ ಅದೇ ವಿದ್ಯಾಪೀಠದ ಪ್ರಾಧ್ಯಾಪಕರೇ ಅನುಸರಿಸದಿರುವದು ಶೋಚನೀಯ. ವಿಮರ್ಶೆಗೆ ಸುಭದ್ರ ತಳಹದಿ ಇರಬೇಕಾದರೆ

ಇಂಥ ಎಲ್ಲ ಪದಗಳ ನಿಶ್ಚಿತಾರ್ಥದ ಬೃಹತ್‌ಕೋಶ ಮಾದರಿಯೊಂದಿಗೆ ಪ್ರಕಟವಾಗಬೇಕು.

ಇಲ್ಲಿಂದ ಪ್ರಾರಂಭವಾದ ಗೊಂದಲ ಎಲ್ಲಾ ದಿಶೆಯಲ್ಲೂ ಹಬ್ಬಿದ್ದು ಕಾಣುತ್ತದೆ. ಕಾವ್ಯದಲ್ಲಿಯ ಅನುಭವಸ್ವರೂಪ, ವಿವಿಧಾಂಗಗಳಿಂದ ಅದರ ಅಭಿವ್ಯಕ್ತಿ ಹೇಗಾಗಿದೆ ಎಂಬುದನ್ನು ಸರಿಯಾಗಿ ತಿಳಿಯದೇ ಮಾಡಿದ ವಿಮರ್ಶೆ ಅನೇಕ ತಪ್ಪು ತೀರ್ಮಾನಗಳಿಗೆ ತವರಾಗುತ್ತದೆ. ವಿಮರ್ಶಾಪ್ರವೇಶವೇ ದೂಷಿತವಾದದ್ದರ ಕೆಲವು ಮಾದರಿಗಳನ್ನು ಇಲ್ಲಿ ತೋರಿಸಲಾಗಿದೆ.

೧) **ಯಾಂತ್ರಿಕ ಪ್ರವೇಶ:** ಕೆಲವರಿಗೆ ಶೀರ್ಷಿಕೆಯಿಂದಲೇ ವಿಷಯ ಗೊತ್ತು ಮಾಡುವ ಕ್ರಮ ಸಾಮಾನ್ಯವಾಗಿ ಬಿಟ್ಟಿದೆ. 'ಹಿಂಡು' ಎಂದಕೂಡಲೇ 'ಯಾಂತ್ರಿಕತೆ', 'ಬಾಲ್ಯದೂರು' ಎಂದಾಕ್ಷಣ 'ನಾಸ್ಟಲ್ಜಿಯಾ', 'ಹಳ್ಳಿ' ಎಂದಾಕ್ಷಣ 'ರೋಮ್ಯಾಂಟಿಕ್' ಎನ್ನುವದು, 'ನಗರ' ಎಂದಾಕ್ಷಣ 'ಪರಕೀಯ ಪ್ರಜ್ಞೆ' ಎನ್ನುವದು—ಹೀಗೆ ಆಯಾ ಕವಿತೆಯಲ್ಲಿ ವಸ್ತು ಏನಿದೆ ಎಂದು ತಿಳಿಯುವ ಮೊದಲೇ ಯಾಂತ್ರಿಕವಾಗಿ ಅದನ್ನು ಗೊತ್ತುಪಡಿಸಿ ಮುಂದೆ ತೀರ್ಮಾನಕ್ಕೆ ಚಟಪಟಿಸುವದೂ ಇದೆ. ಇದರಂತೆ ಕವಿತೆಯ ಧಾಟಿ ಗಮನಿಸದೇ ಯಾಂತ್ರಿಕವಾಗಿ ಹೇಳುವದಿದೆ. ಉದಾ ; ಒಂದು ಕವಿತೆಯ ಉದ್ದಕ್ಕೂ ನಿರಾಶಾವಾದೀ ಧಾಟಿ ಇದ್ದರೆ, ಎಲ್ಲೋ ಒಂದೆಡೆ ತೋರಿಕೆಯ ಆಶಾವಾದೀ ಸಾಲು ವ್ಯಂಗರೂಪದ್ದಿರಬಹುದು ಎಂಬುದನ್ನೂ ಗಮನಿಸುವದಿಲ್ಲ. 'Brutus is an honourable man' ಎಂದರೆ ಕವಿ ಬ್ರೂಟಸ್ಸನ ಬಗ್ಗೆ ಕೊನೆಯಲ್ಲಿ ಆದರ ವ್ಯಕ್ತಪಡಿಸಿದ್ದಾನೆ ಎಂದರೆ ಸಮಂಜಸವಾಗುವದಿಲ್ಲ. ಆ ಸಂದರ್ಭದ ಒಟ್ಟು ಧಾಟಿಗೆ ಹೊಂದಿಸಿ ನೋಡಬೇಕಾಗುತ್ತದೆ. ಇಂಥ ಯಾಂತ್ರಿಕ ಪ್ರಕ್ರಿಯೆಯಿಂದ ಕಾವ್ಯದ ಸ್ವಾರಸ್ಯ ತಿಳಿಯುವದು ಅಷ್ಟೇ ಇರಲಿ, ಕವಿತೆಯ ಮೇಲೆ ಸುಳ್ಳು ತೀರ್ಮಾನ ಆರೋಪಿಸಿದಂತಾಗಿ ಓದುಗರ ಗಮನ ಅನ್ಯ ಕೇಂದ್ರಕ್ಕೆ ಒಯ್ದಂತಾಗುತ್ತದೆ.

೨) **ಸಂಕುಚಿತ ಪ್ರವೇಶ:** ಕೆಲವರಿಗೆ ಕವಿತೆ ಬರೆಯುವ ಅನೇಕ ಪದ್ಧತಿಗಳಿವೆ ಎಂಬುದೂ ತಿಳಿಯದು. ಅವರು ಕನ್ನಡದಲ್ಲಿ ಕಂಡ ಒಂದೋ ಎರಡೋ ಪದ್ಧತಿಗಳನ್ನು ಎತ್ತಿಹಿಡಿದು ಎಲ್ಲಾ ಕವಿತೆಗಳನ್ನು ಅದರ ಒರೆಗಲ್ಲಿಗೆ ತಿಕ್ಕಿ ತಮ್ಮ ಅಮೋಘ ವಿಮರ್ಶಾಲೇಖನ ಬರೆಯುತ್ತಾರೆ ಕವಿತೆಯನ್ನು ಸಂಕೀರ್ಣವಾಗಿಸಿ 'Inclusive' ಪದ್ಧತಿಯಲ್ಲಿ ಬರೆಯಬಹುದು; ನೇರವಾಗಿ ಒಂದು ಭಾವವಿಚಾರಕ್ಕೇ ಸೀಮಿತವಾಗಿಸಿ 'Exclusive' ಪದ್ಧತಿಯಲ್ಲಿ ಬರೆಯಬಹುದು. ಕವಿತೆ ಟೀಕಾಪರ (Commentwise), ಅಥವಾ ನಾಟಕೀಯ ಆಗಿರಬಹುದು; ಸರಳ ಬಂಧದ್ದು (direct) ಅಥವಾ ವಕ್ರ ಬಂಧದ್ದು (Indirection) ಆಗಿರಬಹುದು. ಗಂಭೀರವಾದದ್ದನ್ನು ಲಘುವಾಗಿಯೂ ಲಘುವಾದದ್ದನ್ನು ಗಂಭೀರವಾಗಿಯೂ ಬರೆಯ

ಬಹುದು. ನಾಟಕೀಯತೆ, ರೂಪಕ, ವ್ಯಂಗ್ಯ (Irony) ಸಾಲು ಸಾಲಿನಲ್ಲೂ ತರಬಹುದು. ಆಕೃತಿಸ್ತರದಲ್ಲೂ (structural) ತರಬಹುದು. ವ್ಯಂಗ್ಯ (Irony) ವನ್ನು ಅತಿಶಯೋಕ್ತಿ, ವಿರೋಧಾಭಾಸ (Paradox), ನಿಮ್ನೋಕ್ತಿ (under-statement) ಗಳಿಂದ ಕೂಡಿರಬಹುದು. ಕವಿತೆ ಆತ್ಮನಿಷ್ಠ (subjective) ಆಗಿಯೂ, ವಸ್ತುನಿಷ್ಠ (objective) ಆಗಿಯೂ ಇರಬಹುದು. ಶ್ರೇಷ್ಠ ಕವನಗಳ ಮಾದರಿ ಎರಡೂ ಪದ್ಧತಿಗಳಲ್ಲಿವೆ. ಒಂದೊಂದಕ್ಕೆ ಅದರದೇ ಆದ ರೀತಿ ವೈಶಿಷ್ಟ್ಯಗಳಿರುತ್ತವೆ. ಟೀಕಾಪರ ಕವಿತೆಯಲ್ಲಿ ಬಂಧದ ಬಿಗಿತ ಅಪೇಕ್ಷಣೀಯ ವಾದರೆ ನಾಟಕೀಯ ವಾದದ್ದರಲ್ಲಿ ಸ್ವಗತಗಳಲ್ಲಿ ಅಷ್ಟು ಅಪೇಕ್ಷಣೀಯವಲ್ಲ; ಅಲ್ಲಿ ಅದು ಕೃತಕವೂ ಆಗುವ ಸಾಧ್ಯತೆ ಹೆಚ್ಚು. ಇದನ್ನು ತಿಳಿಯದೇ ಒಂದು ಪದ್ಧತಿಯ ಕವಿತೆಯನ್ನು ಇನ್ನೊಂದು ಪದ್ಧತಿಯ ಕವಿತೆಗೆ ಹೋಲಿಸಿ ತಪ್ಪು ತೀರ್ಮಾನಕ್ಕೆ ಬರುತ್ತಾರೆ. ಇಂಥ ವಿವಿಧ ಪದ್ಧತಿಗಳ ಮಾದರಿಗಳನ್ನೂ ಪದಗಳ ಅರ್ಥಕೋಶದೊಂದಿಗೆ ವಿದ್ಯಾಪೀಠಗಳು ಪ್ರಕಟಿಸಿ ಕಾವ್ಯವಿಮರ್ಶೆಗೆ ಸುಭದ್ರ ತಳಹದಿ ನಿರ್ಮಾಣ ಮಾಡುವದು ಅತ್ಯಂತ ಅವಶ್ಯಕವಾದದ್ದು.

೩) ಮೇಲ್ನೋಟದ ಪ್ರವೇಶ: ಕೆಲವರು ಕವಿತೆಯಲ್ಲಿಯ ಶಬ್ದದ ಕೆಳಗಿನ ಭಾವವಿಚಾರ ಅನುಭವ ಸ್ವರೂಪ ಇವನ್ನೇ ಮರೆತು ಬರೀ ಅದರ ಧಾಟಿಗಷ್ಟೇ ಜೋತು ಬಿದ್ದು ಇಂಥಿಂಥ ಕವಿತೆಯಲ್ಲಿ ವ್ಯಂಗ್ಯವಿದೆ ವಿನೋದವಿದೆ ಚುರುಕು ದ್ರವ್ಯ ಇದೆ ಎಂದೂ ಅದೇ ವಸ್ತುವೆಂಬಂತೆ ಸಾರುತ್ತಾರೆ. ವ್ಯಂಗ್ಯ ವಿನೋದ ಕವಿತೆಯ ಧಾಟಿಗೆ ಸೇರಿದ್ದು, ಅದೇ ವಸ್ತುವಾಗುವದಿಲ್ಲ. ಅದು ವಸ್ತುವಿನೊಡನೆ ಅಥವಾ ವಾಚಕರೊಡನೆ ಕವಿ ತಳೆದ ಮನೋಧರ್ಮ (Attitude) ಇದಿಷ್ಟೇ ಸೂಚಿಸುತ್ತದೆ. ಕವಿತೆಯನ್ನು ಗಂಭೀರ, ವ್ಯಂಗ್ಯ (Ironical), ವಿನೋದಮಯ (Playful), ಕಹಿ (bitter), ಕಟು (satirical), ಹಾಸ್ಯಮಯ (humourous) ಹೀಗೆ ವಿವಿಧ ಧಾಟಿಯಲ್ಲಿ ಬರೆಯಬಹುದು. ಒಂದೇ ಅನುಭವ ಯಾವ ಧಾಟಿಯಲ್ಲೂ ಬರೆಯಲು ಸಾಧ್ಯ. ಕವಿತೆಯಲ್ಲಿ ಒಂದು ನಿರಾಶೆಯ ಅನುಭವ ಇದ್ದರೆ ಅದನ್ನು ಗಂಭೀರವಾಗಿ ಹೇಳಿದ ಮಾತ್ರಕ್ಕೆ ಅದರಲ್ಲಿ ಫಿಲಾಸಫಿ ಇದೆಯೆಂದೂ, ವ್ಯಂಗ್ಯವಾಗಿ ಹೇಳಿದ್ದಕ್ಕೆ ಚುರುಕು ದ್ರವ್ಯ ಇದೆಯೆಂದೂ, ವಿನೋದಮಯವಾಗಿ ಹೇಳಿದ್ದಕ್ಕೆ ಆಶಾದಾಯಿತ್ವ ಇದೆಯೆಂದೂ ಒಮ್ಮೆಲೇ ತೀರ್ಮಾನಕ್ಕೆ ಬಂದರೆ ತಪ್ಪಾಗುವದು. ಇಂಥ ವಿಮರ್ಶೆ ಸಾಮಾನ್ಯವಾಗುತ್ತಾ ಇದೆ ಎಂಬುದು ಶೋಚನೀಯ.

ಒಂದು ಅನುಭವ ತುಂಬ ವಿಶಾಲವಾದರೆ ಅದನ್ನು ಹಂತಹಂತವಾಗಿ ವಿವಿಧ ಮಗ್ಗಲುಗಳಿಂದ ವಿವಿಧ ಕವಿತೆಗಳಲ್ಲಿ ಬಿಡಿಯಾಗಿ ಬರೆಯಬಹುದು. ಅಷ್ಟು ಮಾತ್ರಕ್ಕೆ ವಸ್ತು ಒಂದೇ ಹಂದರ ಬೇರೆ ಎನ್ನಲಾಗದು. ಇಂಥಲ್ಲಿ ಚೌಕಟ್ಟು (Frame work) ಒಂದೇ ಇದ್ದು ಅದನ್ನು ತಳಹದಿಯನ್ನಾಗಿಸಿ ಅದರ ಮೇಲೆ

ಕವಿತೆಗಳ ಆಕೃತಿ (structures) ನಿರ್ಮಿಸಲು ಸಾಧ್ಯ. ಉದಾ: ಮಾನವೀಯ (Humanistic) ಅಥವಾ ಮಾರ್ಕ್ಸಿಸ್ಟ ದೃಷ್ಟಿಕೋನದಿಂದಲೇ ಅನುಭವಗಳನ್ನು ವಿಶ್ಲೇಷಿಸಿ ಕವಿತಾಗುಚ್ಛ ನಿರ್ಮಿಸಬಹುದು, ಆಗ ಚೌಕಟ್ಟಿನಲ್ಲಿ ಒಂದೇ ಆದರೂ ಭಾವ ವಿಚಾರಗಳಲ್ಲಿ ಬೇರೆಬೇರೆಯಾಗಬಹುದು. ಹಾಗೆ ನೋಡಿದರೆ ಎಲ್ಲಾ ಉತ್ತಮ ಕವಿಗಳ ಕಾವ್ಯವನ್ನು ಇಂಥ ಕೆಲವೇ ಚೌಕಟ್ಟಿನಲ್ಲಿ ಇರಿಸಲು ಸಾಧ್ಯ. ಕವಿತೆಯಲ್ಲಿಯ ಭಾವನೆಯ ಒತ್ತು ಎಲ್ಲಿದೆ ಎಂಬುದನ್ನು ತಿಳಿಯುವದು ಮುಖ್ಯವಾಗುತ್ತದೆ. ಆದರೆ ಈ ಕ್ರಮದ ಹೊರತು ಮೇಲ್‌ನೋಟಕ್ಕೆ ಕಾಣುವ ಭಾವದ ನೆಳಲಿನಿಂದಲೇ ತೀರ್ಮಾನಕ್ಕೆ ಬರುವದು ಅಸಮಂಜಸವಾಗುತ್ತದೆ.

೪) **ವಕ್ರಪ್ರವೇಶ :** ಕೆಲವರು ಮುನ್ನುಡಿ ಬ್ಲರ್ಬ್ ಇಂಥವುಗಳ ಮೇಲಿಂದಲೇ ತೀರ್ಮಾನಕ್ಕೆ ಬರುವದಿದೆ. ಮುನ್ನುಡಿ ವಿಮರ್ಶೆಯಲ್ಲಿ ಕೆಲವು ನೋಟಗಳನ್ನಷ್ಟೇ ಎತ್ತಿಹಿಡಿಯುವ ಪ್ರಕ್ರಿಯೆ ಎಂಬುದನ್ನು ಮರೆಯುತ್ತಾರೆ. ಉದಾ ; ಕವಿ ವೃತ್ತಿಯಲ್ಲಿ ವಕೀಲನಾಗಿದ್ದಾನೆ ಎಂದರೆ, ಇವರಿಗೆ ವಾದ ಮಾಡುವ ಚಟವಿದೆಯೆಂದೂ ಆದ್ದರಿಂದ ಕವಿತೆ ಅಡ್ಡಾದಿಡ್ಡಿ ಬೆಳೆದಿದೆ ಎಂದೂ ಬರೆಯುತ್ತಾರೆ.* ವಾದ ಮಾಡುವವರು ತಾರ್ಕಿಕವಾಗಿಯೇ ವಿಷಯ ಬೆಳೆಸುತ್ತಾರೆ ಅಡ್ಡಾದಿಡ್ಡಿಯಾಗಲ್ಲ ಎಂಬುದನ್ನು ತಿಳಿಯದ ಈ ವಿಮರ್ಶಕರು ತಿಳಿಯಬೇಕಾದದ್ದೆಂದರೆ ಇದೇ ಧಾಟಿಯಲ್ಲಿ ಹೋದರೆ ಕವಿ ಡಾಕ್ಟರ್‌ನಾಗಿದ್ದರೆ ಮಾತ್ರೆ ಕೊಡುವ ಚಟವಿದೆಯೆಂದೂ ಎಂಜಿನಿಯರ್ ಆದರೆ ಕೊರೆಯುವ ಚಟವಿದೆಯೆಂದೂ ಹೇಳಬಹುದು; ಪ್ರಾಧ್ಯಾಪಕನಾದರೆ ಯಾವ ಚಟದ ಚೀಟಿ ಅಂಟಿಸಬೇಕು ಎಂಬುದೂ ಕಷ್ಟಕರವಾದದ್ದಲ್ಲ. ಇಂಥ ವಿಮರ್ಶೆ ವಿದ್ಯಾಪೀಠದ ಸ್ತರದಲ್ಲಿ ಆಗುತ್ತಿದ್ದದ್ದು ಅತ್ಯಂತ ಶೋಚನೀಯ ಹಾಗೂ ಅದರ ಗಾಂಭೀರ್ಯವನ್ನೇ ಪ್ರಶ್ನಿಸುವಂತಾಗುತ್ತದೆ.

೫) **ನ್ಯೂನತಾನಿಷ್ಠ ಪ್ರವೇಶ :** ಕೆಲವರಿಗಂತೂ ಕಾವ್ಯದಲ್ಲಿ ಏನಿದೆ ಎಂಬುದು ಸರ್ವಥಾ ಕಾಣದು. ಅದರಲ್ಲಿ ಏನಿಲ್ಲವೋ ಅದನ್ನೇ ನಿರಾಯಾಸವಾಗಿ ಕಂಡು ತಾಳ ತಂಬೂರಿಯೊಡನೆ ಹಾಡುತ್ತಾ ಇರುತ್ತಾರೆ. ಇವರಿಗೆ ಬೃಹದ್ದರ್ಶಕ ಕೊಟ್ಟರೂ ನಿರುಪಯುಕ್ತವಾದರೆ ಆಶ್ಚರ್ಯವಿಲ್ಲ. ಕವಿತೆ ಅದರ ಉದ್ದೇಶಕ್ಕೆ ಸೀಮಿತವಾಗಿರುತ್ತದೆ. ಆದ್ದರಿಂದ ಅದು ಎಲ್ಲವನ್ನೂ ಅಳವಡಿಸಿಕೊಂಡಿರಬೇಕಾಗಿಲ್ಲ. ಹಾಗೆ ಯಾವದೇ ಕವಿತೆಯನ್ನು ತಳ್ಳಿಹಾಕಬಹುದು. ನೇರ ಬರೆದರೆ ವಕ್ರಬಂಧವಿಲ್ಲೆಂದೂ, ಸೀಮಿತವಾಗಿ ಬರೆದರೆ ಸಂಕೀರ್ಣವಿಲ್ಲೆಂದೂ ಟೀಕಾಪರವಾದರೆ ನಾಟಕೀಯವಾಗಿಲ್ಲವೆಂದೂ, ಮನುಷ್ಯದೇವರ ಸಂಬಂಧಕ್ಕಾಗಿ ಬರೆದರೆ ಸಾಮಾಜಿಕ ಕಳಕಳಿ ಇಲ್ಲೆಂದೂ, ಸಾಮಾಜಿಕ ಆಗುಹೋಗುಗಳ ಬಗ್ಗೆ ಬರೆದರೆ ಅದರಲ್ಲಿ ನಿರಂತರತೆಯ ಹಳಹಳಿ ಇಲ್ಲೆಂದೂ ಹೇಳಿ ತಳ್ಳಿ ಹಾಕುವದು ಕಷ್ಟಕರವಲ್ಲ. ಇದೇ

* ನೋಡಿ : ೧೯೭೮ ರ ಸಾಹಿತ್ಯ ವಾರ್ಷಿಕ, ಪುಟ ೧೧, ಲೇಖಕ : ಡಿ. ಆರ್. ನಾಗರಾಜ್.

ರೀತಿ ಬರೆಯಬೇಕು ಇಂಥ ವಿಷಯವೇ ಇರಬೇಕು ಎಂಬುದನ್ನು ವಿಮರ್ಶಕರು ನಿರ್ಧರಿಸಲಾರರು. ಅದು ಕವಿಯ ಆಯ್ಕೆ. ಕವಿತೆಯಲ್ಲಿ ಏನಿದೆ, ಅದರಲ್ಲಿಯ ಅನುಭವಸ್ವರೂಪ ಮತ್ತದರ ಅಭಿವ್ಯಕ್ತಿಸ್ವರೂಪ, ಅವುಗಳ ಹೊಂದಾಣಿಕೆ ಇವನ್ನು ವಿಮರ್ಶಕನು ತಿಳಿದು ಕವಿತೆಯ ಸ್ವಾರಸ್ಯಕ್ಕೆ ಸ್ಪಂದಿಸುವ ಯತ್ನವೇ ವಿಮರ್ಶೆಯಾಗುವದೇ ಹೊರತು ಸಾರಾಸಗಟು ಸರ್ಟಿಫಿಕೇಟು ಹಂಚುವ ಯತ್ನವಲ್ಲ. ಅಜ್ಞಾನದ ವೈಪರೀತ್ಯದ ಒಂದು ನಿದರ್ಶನ ಇಲ್ಲಿ ಕೊಟ್ಟರೆ ಎಷ್ಟರಮಟ್ಟಿಗೆ ನಮ್ಮ ಕಾವ್ಯವಿಮರ್ಶೆ ಗತಿಗೆಟ್ಟಿದೆ ಎಂಬುದು ಸ್ಪಷ್ಟವಾಗುತ್ತದೆ. ನನ್ನ 'ನಗರಾಯಣ'ದಲ್ಲಿಯ 'ಮುಂಬೈಪ್ರಯಾಣ'ದ ಬಗ್ಗೆ 'ಮುನ್ನಡೆ'ಯ ಜನೇವರಿ ೧೫, ೧೯೮೦ರ ಸಂಚಿಕೆಯಲ್ಲಿ ಪ್ರಕಟವಾದದ್ದು—ಲೇಖಕ : ಎಂ. ಎನ್ ಪ್ರಭು : "ಮುಂಬೈ ಪ್ರಯಾಣವು ಬಂಕೀಕೋಡ್ಲದ ನಿಸರ್ಗರಮ್ಯ ವಾತಾವರಣದಿಂದ ಮುಂಬೈಯ ಕೃತ್ರಿಮ ಮರುಭೂಮಿಯ ಬರಡು ಜೀವನದ ಅಗ್ನಿಕುಂಡದಲ್ಲಿ ಹಾರಿಕೊಂಡಂಥ ಕವಿಯ ಭಾವನೆಯನ್ನು ಚಿತ್ರಿಸುತ್ತಿದೆ. ಮುಂಬೈಗೆ ಬಂದದ್ದರಿಂದ ತಾನು ಏನೂ ಸಾಧಿಸಿಲ್ಲ ಎಂಬ ವಿಚಾರಬಂದಿದೆ"....ಕೊನೆಯಲ್ಲಿ ಸಂಗ್ರಹರೂಪವಾಗಿ ಹೇಳಿದ ಮಾತು "ಸಾಮಾನ್ಯವಾಗಿ ಎಲ್ಲಿಯೂ ಹಾಸ್ಯದ ಬುಗ್ಗೆ ಚಿಮ್ಮಿಲ್ಲ; ಆದರೆ ಸೀರಿಯಸ್ ಎಂದರೆ Philosophic ಆಗಿಯೂ ಕಾವ್ಯ ಹರಿದಿಲ್ಲ; ಇದು ದುರ್ದೈವದ ಸಂಗತಿ." ಈ ವಿಮರ್ಶೆಯಲ್ಲಿ ದುರ್ದೈವದ ಸಂಗತಿ ಎಂದರೆ ಕವಿತೆಯಲ್ಲಿ 'ನಾನು' ಎಂದರೆ ಕವಿ ತಾನೇ ಇರಬೇಕಾಗಿಲ್ಲ ಎಂಬ ಮೂಲಭೂತ ವಿಮರ್ಶಾಂಶವನ್ನೂ ವಿಮರ್ಶಕರು ತಿಳಿದಿಲ್ಲ ! ಮಾತುಮಾತಿಗೆ ಏಲಿಯಟ್ ಜೋಯ್ಸ್ ಎಂತ ಹೇಳುವವರು ಏಲಿಯಟ್‌ನ Three Voices of Poetry ಅಭ್ಯಸಿಸಿದಂತಿಲ್ಲ ! ಅಲ್ಲದೇ ಇದೇ ವಿಮರ್ಶಕರು, ಕಾವ್ಯ ಎಂದರೆ ಹಾಸ್ಯದ ಬುಗ್ಗೆ ಚಿಮ್ಮಬೇಕು, ಸೀರಿಯಸ್ ಎಂದರೆ 'ಫಿಲಾಸಾಫಿಕ್' ಆಗಿರುವದು ಎಂಬ ಅತಿಸರಳ ಫಾರ್ಮ್ಯುಲಾ ಮಾಡಿಕೊಂಡಂತಿದೆ. ಕಾವ್ಯಸ್ವರೂಪದ ಮೂಲಭೂತ ಅಂಶಗಳನ್ನೇ ತಿಳಿಯದ ಈ ವಿಮರ್ಶಕರು ಇದೇ ವಿಮರ್ಶೆಯ ತುಂಬಾ ಅರ್ಥವಿಲ್ಲದ ಬಾಲಿಶ ಮಾತುಗಳನ್ನಾಡಿದರೆ ಆಶ್ಚರ್ಯವಿಲ್ಲ. ಶೋಚನೀಯವಾದದ್ದೆಂದರೆ ಇವರು ಒಮ್ಮೊಮ್ಮೆ ವಿದ್ಯಾಪೀಠಗಳಿಗಾಗಿ ಲೇಖನ ಬರೆಯುತ್ತಾರೆ ಎಂಬ ದು.*

ಇದು ವಿಮರ್ಶಾರಂಗದ ಸಾಮಾನ್ಯ ಅವಸ್ಥೆಯಾದರೆ ಒಮ್ಮೊಮ್ಮೆ ಹಿರಿಯ ವಿಮರ್ಶಕರೂ ಈ ಗೊಂದಲಪುರವನ್ನು ಇನ್ನೂ ಗೊಂದಲಮಯ ಮಾಡುವಂತಿದೆ. ವಿದ್ವಾಂಸರೂ, ಸಹೃದಯರೂ, ಅಭಿಜಾತ ರಸಿಕರೂ ಹಾಗೂ ಗೌರವಾರ್ಹವಾದವರು ಎಂದರೆ ಪ್ರೊ. ಕುರ್ತಕೋಟಿ, ಡಾ ಗೋಕಾಕ, ಡಾ. ಶಾಂತಿನಾಥ ದೇಸಾಯಿ, ಡಾ. ಶಂಕರ ಪುಣೇಕರ, ಡಾ. ಅನಂತಮೂರ್ತಿ, ಈ ಕೆಲವೇ ವಿಮರ್ಶ

* ಇವರು ಬೆಂಗಳೂರು ಯುನಿವರ್ಸಿಟಿಗಾಗಿ ಗಂಗಾಧರ ಚಿತ್ತಾಲರ 'ದುಃಖಗೀತ'ದ ಬಗೆ ಲೇಖನ ಬರೆದಿದ್ದಾರೆ !

ಕರು. ಆದರೆ ಈ ಹಿರಿಯರೂ ಒಮ್ಮೊಮ್ಮೆ ಓದುಗರನ್ನು ಗೊಂದಲದಲ್ಲಿ ಬೀಳಿಸು ವದೂ ಉಂಟು. ಕನ್ನಡದ ಆಧುನಿಕ ಎರಡು ಪಂಥಗಳ ನಾಮಕರಣವೇ ಗೊಂದಲ ಮಯವಾದದ್ದನ್ನು ನೋಡಬಹುದು. ಒಂದು 'ನವೋದಯ', ಒಂದು 'ನವ್ಯ' ! ನವೋದಯ ಎಂದರೂ ಹೊಸತದರ ಉದಯ, ನವ್ಯ ಎಂದರೂ ಹೊಸತಾಗಿ ಹುಟ್ಟಿದ್ದು. ನಾಮಕರಣದಲ್ಲೇ ಗೊಂದಲವಾದಾಗ ಅವುಗಳ ಅಂತರ ಅರಿಸುವಲ್ಲಿ ಆಗದೇ ಹೋಗುವದೇ ? ಒಮ್ಮೆ ಶೈಲಿಯಲ್ಲೆಂದರು-ನಾಟಕೀಯತೆ ಆಡುಮಾತು ಮುಕ್ತಛಂದ ಎಂದರು. ಇವೆಲ್ಲವೂ ಬೇಂದ್ರೆಯವರ ಕಾವ್ಯದಲ್ಲಿ ತುಂಬಾ ಪರಿ ಣಾಮಕಾರಿಯಾಗಿ ಬಂದಿದೆ. ಸ್ವತಃ ಗೋಕಾಕರೇ 'ಸಮುದ್ರಗೀತ'ದಲ್ಲಿ ಮುಕ್ತ ಛಂದ ಬಳಸಿದ್ದಾರೆ. ಇನ್ನೊಮ್ಮೆ ಭಾವತೀವ್ರತೆ ಎಂದರು. ತೀವ್ರತೆ ಇಲ್ಲದೇ ಯಾವ ಕಾವ್ಯವೂ, ನವ್ಯವೂ ಸೇರಿ, ಉತ್ತಮವಾಗುವದಿಲ್ಲ. ಎಲಿಯಟ್ ಹೇಳಿದ ಮಾತು ಇಲ್ಲಿ ನೆನೆಯಬಹುದು :- "Poetry is affirmation in verse of private experience at its greatest intensity, becoming universal." ಸ್ವಾನುಭವವನ್ನು ಅದರ ತೀವ್ರತೆಯೊಂದಿಗೆ ಸಾರ್ವತ್ರಿಕವಾಗು ವಂತೆ ನಿರೂಪಿಸುವದು ಕಾವ್ಯ. ಅಲ್ಲದೇ ವಿಭಿನ್ನ ಭಾವವಿಚಾರಗಳ ಸಂಯೋಗದ ಕಲಾತ್ಮಕ ಪ್ರಕ್ರಿಯೆಯಲ್ಲೂ ತೀವ್ರತೆ ಬೇಕು ಎನ್ನುತ್ತಾನೆ. ಒಂದು ಆತ್ಮನಿಷ್ಠ ಎಂದರು ಒಂದು ವಸ್ತುನಿಷ್ಠ ಎಂದರು. ಯಾವ ಕಾವ್ಯವೂ ಆತ್ಮನಿಷ್ಠತೆಯಿಂದ ಪೂರ್ತಿ ಮುಕ್ತವಾಗುವದಿಲ್ಲ. ಪಾಶ್ಚಾತ್ಯರಲ್ಲಿಯ ವಿಮರ್ಶೆ ಪರಿಶೀಲಿಸಿದರೆ ಹೊಸ ಅನುಭವಕ್ಕಾಗಿ ಹೊಸ ಶೈಲಿ ಎಂಬುದು ಸ್ಪಷ್ಟವಾಗುತ್ತದೆ. 'The New Poetry' ಎಂಬ ಸಂಕಲನಕ್ಕೆ ೧೯೬೨ ರಲ್ಲಿ ಮುನ್ನುಡಿ ಬರೆಯುತ್ತಾ ಎ ಅಲ್ವರೇಸ್ ಇವರು ಎನ್ನುತ್ತಾರೆ- "The final justification of experimentalism lay, of course, beyond mere technique. The great moderns experimented not just to make it new formally, but to open poetry to new areas of experience." ಹೊಸ ಪ್ರಯೋಗದ ಸಮರ್ಥನೆ ಟೆಕ್ನಿಕ್ಕಿನಲ್ಲಿಲ್ಲ, ಅದು ಹೊಸ ಅನುಭವದ ಅಭಿವ್ಯಕ್ತಿಗಳಿಗೆ ತೆರೆದಾಗ ಮಾತ್ರ. ಹೊಸ ಅನುಭವ ಎಂದರೆ ಸಮಕಾಲೀನ ಬೌದ್ಧಿಕ, ರಾಜಕೀಯ, ಸಾಮಾಜಿಕ ಹಿನ್ನೆಲೆಯಲ್ಲಿ ಹೊಸ ಜೀವನಕ್ರಮಕ್ಕೆ ಅಂಟಿಕೊಂಡು ಬದುಕುವಾಗಿನ ಅನುಭವ. ಈ ಶತಕ ಹಿಂದಿನ ಎಲ್ಲ ಶತಕಗಳಿಗಿಂತಲೂ ತೀರ ಭಿನ್ನ. ಈ ಶತಕದಲ್ಲೂ ಪೂರ್ವಾರ್ಧದ ಪರಿಸ್ಥಿತಿ ಗಳಿಗೂ ಉತ್ತರಾರ್ಧದ ಪರಿಸ್ಥಿತಿಗಳಿಗೂ ತುಂಬ ಅಂತರವಿದೆ. ಆದ್ದರಿಂದ ಇಂದಿನ ಅನುಭವಗಳು ವಿಶಿಷ್ಟವಾಗಿವೆ. ದಶಕ ದಶಕ ಸರಿದಂತೆ ಜಾಗತಿಕ ಸ್ಥಿತಿಗತಿ ಗಳಲ್ಲಿ ಜ್ಞಾನ ವಿಜ್ಞಾನಗಳಲ್ಲಿ ಮಾರ್ಪಾಡಾಗಿ ಅವುಗಳಿಗೆ ಪ್ರತಿಕ್ರಿಯಿಸುವದರಲ್ಲೂ ಹೊಸತನ ವೈಶಿಷ್ಟ್ಯ ಬರುತ್ತಿದೆ. ಆದ್ದರಿಂದ ಪಾಶ್ಚಾತ್ಯರಲ್ಲಿ ಹೊಸ ಆಂದೋಲನ ಗಳಿಗೆ ಅವು ಪ್ರತಿನಿಧಿಸುವ ಗುಣ-ಅನುಭವಗಳ ವೈಶಿಷ್ಟ್ಯಗಳ ಮೇಲೆ ನಾಮಕರಣ

ಮಾಡುವದನ್ನು ಕಾಣುತ್ತೇವೆ. ಉದಾ : ಜಾರ್ಜಿಯನ್ ಪಂಥಕ್ಕೆ ಪ್ರತಿಕ್ರಿಯೆ ತೋರಿಬಂದ ಪ್ರತಿಮಾನಿಷ್ಠ ಕಾವ್ಯಪಂಥಕ್ಕೆ 'Imagism' ಎಂದರು. ಸಾಮಾಜಿಕ ಪ್ರಜ್ಞೆಯಿಂದಲೇ ಪ್ರಮುಖವಾಗಿ ನಿರ್ಮಿತವಾದ ೩೦ರ ದಶಕದ ಕಾವ್ಯಪಂಥಕ್ಕೆ 'Social Poetry' ಎಂದರು. ಇವೆರಡಕ್ಕೂ ವಿರುದ್ಧವಾಗಿ ಬಂದ ೪೦ರ ದಶಕದ ರೊಮ್ಯಾಂಟಿಕ್ ಅಂಶ ಅಳವಡಿಸಿಕೊಂಡ ಕಾವ್ಯಕ್ಕೆ Neo-romantic ಎಂದರು. ನಂತರ ೬೦ರ ದಶಕದಲ್ಲಿ ಸ್ವಂತ ಕೌಟುಂಬಿಕ ಜೀವನದ ಅನುಭವಗಳ ನಿವೇದನಾಪರ ಅಂಶ ಒಳಗೊಂಡ ಕಾವ್ಯಕ್ಕೆ 'Confessional Poetry' ಎಂದರು. ಆದರೆ ಇಲ್ಲಿ ಮಾತ್ರ 'ನವೋದಯ' 'ನವ್ಯ' ಎಂತ ಓಡಾಡುತ್ತಾರೆ! ಇನ್ನು ನವೀನ, ನವ್ಯ ನವೋದಯ ಇತ್ಯಾದಿ ಬಂದರೂ ಆಶ್ಚರ್ಯವಿಲ್ಲ.

ಇನ್ನು ೧೯೮೩ರ ಪ್ರಜಾವಾಣಿ ದೀಪಾವಳಿ ಸಂಚಿಕೆಯಲ್ಲಿ ಕಾವ್ಯದ ಬಗ್ಗೆ ಬರೆಯುತ್ತ ಸನ್ಮಾನ್ಯ ಕುರ್ತಕೋಟಿಯವರು ಹೀಗೆನ್ನುತ್ತಾರೆ: ಅಡಿಗರ ಕಾವ್ಯ ಸಂದರ್ಭದಲ್ಲಿ: - "ಒಂದು ದಿಕ್ಕಿನಿಂದ ಅಪಮೌಲ್ಯಗಳನ್ನು ಸಂಹರಿಸುತ್ತ ಇನ್ನೊಂದು ದಿಕ್ಕಿನಿಂದ ಮೌಲ್ಯಗಳನ್ನು ಕಾಯ್ದುಕೊಳ್ಳುವ ಅವರ ಕಾವ್ಯಪ್ರಯತ್ನದ ಧೀರೋದಾತ್ತತೆಯಲ್ಲಿ ಅಡಿಗರ ಕಾವ್ಯದ ನಿಜವಾದ ಸತ್ವವಿರುವದು." ಹಿಂದಿನ ತಲೆಮಾರಿನ ಪ್ರಮುಖ ಕವಿಗಳೆಲ್ಲ ಮೌಲ್ಯನಷ್ಟವನ್ನು ಖಂಡಿಸಿ ಮೌಲ್ಯ ಮಂಡನೆಗಾಗಿ ಪ್ರತಿಪಾದಿಸಿದವರೇ. ಇದೇ ತರಹದ ಮಾತನ್ನು ವಿನಾಯಕರ ಬಗ್ಗೂ ಹೇಳಿದೆ.* "ವಿನಾಯಕರ ನವ್ಯಕಾವ್ಯ ಒಂದು ಕೈಯಲ್ಲಿ ವಿಚಾರಶಕ್ತಿಯನ್ನೂ ಇನ್ನೊಂದರಲ್ಲಿ ಜೀವನ ಮೌಲ್ಯಗಳನ್ನೂ ಭದ್ರವಾಗಿ ಹಿಡಿದುಕೊಂಡಿದೆ." ೨೦ ವರುಷಗಳ ಹಿಂದೆ ವಿನಾಯಕರ ಬಗ್ಗೆ ಹೇಳಿದ ಮಾತನ್ನು ಈಗ ಅಡಿಗರ ಬಗ್ಗೂ ಹೇಳಿದರೆ ಅಡಿಗರ ಸಾಮರ್ಥ್ಯದ ಪ್ರತ್ಯೇಕತೆ ಹೇಳಿದಂತಾಗುವದೇ ? ಆ ಗುಣದ ಮೇಲಿಂದಲೇ ಹಳೇ ತಲೆಮಾರಿನ ಕವಿಗಳ ಪಂಕ್ತಿಯಲ್ಲೇ ನಿಲ್ಲಿಸಿದರೆ, ಅವರು ನವ್ಯದ ಶ್ರೇಷ್ಠ ಪ್ರತಿನಿಧಿ ಎಂಬ ಪ್ರತಿಮೆಗೆ ಬಾಧಕವಲ್ಲವೇ ? ಅಲ್ಲದೇ 'ಮೌಲ್ಯ' ಎಂಬ ಸಂಕಲ್ಪವನ್ನೇ ತುಂಬ ಸಂಕೋಚವಾಗಿ ಬಳಸುವ ಶತಕ ಇದು. ಮಾರ್ಕ್ಸವಾದ, ಅಸ್ತಿತ್ವವಾದ, ವಿಶ್ಲೇಷಣಾನಿಷ್ಠ ತಾತ್ವಿಕವಾದ (Analytical Philosophy) ಈ ಶತಕವನ್ನು ಆಳುತ್ತಿರುವಾಗ, ಜೊತೆಗೆ ಮಾನವಶಾಸ್ತ್ರ ಮಾನಸಶಾಸ್ತ್ರ ಈ 'ಮೌಲ್ಯ'ದ ಬಗ್ಗೆ ಸಾಪೇಕ್ಷತೆ ಅನಿಶ್ಚಿತತೆ ಪ್ರಕಟಿಸುವಾಗ 'ಮೌಲ್ಯ' ಎಂಬುದು ಇಂದಿನ ಜೀವನ ಕ್ರಮಕ್ಕೆ ಯಾವದು ಎಂಬುದು ಅನಿಶ್ಚಿತವಾದಾಗ, ಅದನ್ನು ಕಾವ್ಯದ ಗುಣಮಾನಕ್ಕೆ ಬಳಸುವದೇ ತುಂಬಾ ಅಪಾಯಕಾರಿ. ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲೂ ಅದು ಅಸ್ಪಷ್ಟ. ಸಾವಿರ ದೇವರುಗಳು, ಸಾವಿರ ಧರ್ಮಗಳು, ಅವ್ಯಕ್ತದ ಸಾವಿರ ಮೌಲ್ಯಗಳು ನಮ್ಮಲ್ಲಿರುವಾಗ 'ಮೌಲ್ಯ' ಎಂದರೆ ಯಾವದೂ ಸ್ಪಷ್ಟವಾಗುವದಿಲ್ಲ.

---

* ನೋಡಿ : ನಡೆದುಬಂದ ದಾರಿ, ಪುಟ ೮೯

ಪ್ರತಿಮಾವಿಧಾನದ ಹಾಗೂ ನವ್ಯವಿಧಾನದ ಒಂದು ಪ್ರಮುಖ ಅಂಶವೆಂದರೆ ಅಸ್ಪಷ್ಟ ಕಲ್ಪನೆಗಳಿಗೆ ಅವಕಾಶ ನೀಡದಿರುವದು. ಯಾವ ಕವಿಯೂ ಅದನ್ನು ಅಸ್ಪಷ್ಟವಾಗಿ ಬಳಸಿದರೆ ಅದು ಗುಣವಾಗುವದಿಲ್ಲ; ಪ್ರಶಂಸನೀಯುವಂತೂ ಅಲ್ಲೇ ಅಲ್ಲ. ಇನ್ನು ಮೌಲ್ಯಾನ್ವೇಷಣೆ ಕಾವ್ಯೋದ್ದೋಗದ ಒಂದು ಭಾಗವೆಂದರೆ (ಅದನ್ನು ನಾನೂ ನಂಬುತ್ತೇನೆ) ಅದನ್ನು ಇಂದಿನ ಜೀವನ ಕ್ರಮದ ಹಿನ್ನೆಲೆಯಲ್ಲಿ ಹೇಗೆ ಅನಿವಾರ್ಯವಾಗಿದೆ ಎಂಬುದನ್ನು ಅದರ ಸ್ಪಷ್ಟ ಸ್ವರೂಪದೊಂದಿಗೆ ಹೇಳಿದರೆ ಆ ಕವಿತೆ ಮಹತ್ವಪೂರ್ಣವಾಗುತ್ತದೆ. ಅಂಥ ಪ್ರಯತ್ನ ಅಡಿಗರ ಕಾವ್ಯಸಂದರ್ಭ ದಲ್ಲಿ ಮಾಡಿದರೆ ಅವರ ಕಾವ್ಯದ ಮಹತ್ವ ತಿಳಿಯುವದೇ ಹೊರತು 'ಮೌಲ್ಯ' ಎಂದು ಅಸ್ಪಷ್ಟವಾಗಿ ಹೇಳುವದರಿಂದಲ್ಲ.

ಇನ್ನು ಗಂಗಾಧರ ಚಿತ್ತಾಲರ ಬಗ್ಗೆ ಬರೆಯುವಾಗ, "ಸ್ವಾನುಭವವನ್ನೇ ಉಪಯೋಗಿಸುವ ಚಿತ್ತಾಲರ ಕಾವ್ಯ ಚಾತುರ್ಯ" ಎಂದಿದ್ದಾರೆ. ಅನುಭವದ ಅಭಿ ವ್ಯಕ್ತಿಗಾಗಿ ರೂಪಕ ಒಂದು ಸಾಧನ. ಅದು ಸಾಲಿನ ವಿವರಗಳಲ್ಲೂ ಬರಬಹುದು ಅಥವಾ ಆಕೃತಿಸ್ತರದಲ್ಲೂ. ಆದರೆ ಅನುಭವವೇ ರೂಪಕ ಎಂದರೇನು ? ಕಾವ್ಯ ದಲ್ಲಿ ಅನುಭವ ಮುಖ್ಯವೇ ಹೊರತು ಯಾವದೋ ವಸ್ತುವಿಗೆ ಅದು ರೂಪಕ ವಾಗುತ್ತದೆ ಎಂಬುದಿಲ್ಲ. ಇನ್ನು ಆ ವಸ್ತುಸನ್ನಿವೇಶ ಯಾವದು ಎಂಬುದೂ ಸ್ಪಷ್ಟವಿಲ್ಲ.

ರಾಮಾನುಜನ್‌ರ ಬಗ್ಗೆ ಬರೆಯುವಾಗ ಎನ್ನುತ್ತಾರೆ : "ಇವರು ಕಾವ್ಯದ ಮುಖಾಂತರವಾಗಿ ಆಕಾರ ಕೊಡುವ ಪ್ರಯತ್ನ ಮಾಡುವದಿಲ್ಲ ಆದರ ಬದ ಲಾಗಿ ಅನುಭವದ ಆಕಾರ ಮೂಡಿಸುವ ಪ್ರಯತ್ನದಲ್ಲಿರುತ್ತಾರೆ." ಜೊತೆಗೆ ಉದಾ ಹರಣೆ ನೀಡಿದ್ದಾರೆ. ಅನುಭವದ ಆಕಾರ ಮೂಡಿಸುವ ಯತ್ನ ಎಲ್ಲಿ ವಸ್ತುಪ್ರತಿ ರೂಪಾತ್ಮಕತೆಯ ಸಾಧನ ಬಳಸಿವೆಯೋ, ಅಂದರೆ ನವ್ಯಮಾರ್ಗದಲ್ಲಿ, ಅಲ್ಲೆಲ್ಲ ಆಗುತ್ತಿದೆ. ಅದು ಬರೇ ರಾಮಾನುಜನ್‌ರ ವೈಶಿಷ್ಟ್ಯವಲ್ಲ. ರೂಪಕ, ಪ್ರತಿಮೆ, ಪ್ರತೀಕ, ಚಿತ್ರಸೃಷ್ಟಿ ಇವೆಲ್ಲ ನವ್ಯದಲ್ಲಿ ಬಳಸುವದು (ಹಾಗೆ ಎಲ್ಲ ಉತ್ತಮ ಕಾವ್ಯ ದಲ್ಲೂ ಕೂಡ) ಇದೇ ಕಾರಣಕ್ಕಾಗಿ ಹೊರತು ಅಲಂಕಾರಕ್ಕಲ್ಲ ನವ್ಯದ ಪ್ರಾರಂಭ ದಿಂದಲೇ ಇವೇ ಪ್ರಕ್ರಿಯೆ ನಡೆದಿದೆ. ಅದು ರಾಮಾನುಜನ್‌ರಿಗೆ ವಿಶಿಷ್ಟವಾದದ್ದಲ್ಲ. ಇನ್ನು ವಿಮರ್ಶಕರು ನೀಡಿದ ಉದಾಹರಣೆಯಲ್ಲಿ, ಮೊದಲನೇ ಸಾಲು ಭಾವದ ನೇರ ಹೇಳಿಕೆಯುದ್ದು, ಎರಡನೇ ಸಾಲು ಆ ಭಾವದ ಸ್ಪಷ್ಟ ಚಿತ್ರ ಕಣ್ಣೆದುರು ನಿಲ್ಲಿ ಸುವದು. ಆ ಚಿತ್ರದಿಂದಲೇ ಭಾವವನ್ನು ಮೂಡಿಸುವಂತಿದ್ದರೆ ನೇರ ಹೇಳಿಕೆಯ ಮೊದಲ ಸಾಲು ಅನವಶ್ಯಕ ರಾಮಾನುಜನ್‌ರು ಅವೇಳೆಗಳಲ್ಲಿ ಹಲವಾರು ರೂಪಗಳಿಂದ ನೆಲೆಸಿದ್ದಾರೆ. ಅಲ್ಲಿಯ ಕವಿಗಳಿಂದ ಪ್ರಭಾವಿತರಾದರೆ ಆಶ್ಚರ್ಯ ವಿಲ್ಲ. ರಚನೆಯನ್ನು ಪೂರ್ತಿ ಕಳೆದು ದೃಶ್ಯವತ್ತಾಗಿ (Typographically) ಮೊನ

ಚಾಗಿ ಬರೆಯುವ ಪದ್ಧತಿ ವಿಲಿಯಮ್ಸ್ ಹಾಗೂ ಕಮಿಂಗ್ಸ್ ಬಹಳಷ್ಟು ಮಾಡಿದ್ದಾರೆ. ಕಮಿಂಗ್ಸನಂತೂ ಹೊಸ ಭಾಷೆಯನ್ನೇ ಕಾವ್ಯಕ್ಕಾಗಿ ಸೃಷ್ಟಿಸಿದ್ದಾನೆ. (ಅವನ ಕಾವ್ಯದ ವ್ಯಾಕರಣ ಇಲ್ಲಿಯ ಪಂಡಿತರು ಇನ್ನೂ ತಿಳಕೊಳ್ಳಲು ಯತ್ನಿಸುತ್ತಾರೆ ಎಂದೂ ಎನ್ನುವರು ಕೆಲವಿಮರ್ಶಕರು.) ಶಬ್ದಗಳನ್ನು ಒಡೆಯುವದು, ವಿವಿಧ ಶಬ್ದ ಜೋಡಿಸಿ ಸಂಯುಕ್ತ ಶಬ್ದ ನಿರ್ಮಿಸುವದು, ಕ್ರಿಯಾಪದ ನಾಮಪದಗಳಂತೇ ಬಳಸಿ ಅದಕ್ಕೆ ವಿಶೇಷಣ ಜೋಡಿಸುವದು ಇತ್ಯಾದಿ ಅನೇಕ ಕಸರತ್ತು ಮಾಡಿದ್ದಾರೆ. ಸುದೈವಕ್ಕೆ ರಾಮಾನುಜನ್ ಶಬ್ದಭೇದನ ಪ್ರಯೋಗಕ್ಕೆ ಸೀಮಿತರಾಗಿದ್ದಾರೆ ಎನ್ನುವದು ಅವರ ಪ್ರಬುದ್ಧತೆ ಸೂಚಿಸುತ್ತಿದೆ ಎಂದು ನನ್ನ ಅನಿಸಿಕೆ.

ಇನ್ನು ೧೯೮೧ ರ 'ಋಜುವಾತಿ'ನಲ್ಲಿ ಸನ್ಮಾನ್ಯ ಅನಂತಮೂರ್ತಿಯವರು, 'ಸೂರ್ಯ ಇವನೊಬ್ಬನೇ' ಎಂಬ ಸಂಕಲನದ ಬಗ್ಗೆ ಬರೆಯುತ್ತಾ ಪ್ರಾರಂಭದಲ್ಲೇ ಅದು ಪ್ರಥಮ ಶ್ರೇಣಿಯ ಸಂಕಲನ ಎಂದೂ ಅವುಗಳಲ್ಲಿ ಚಿತ್ರಗಳ ಸೊಗಸು ಬಂಧದ ಬಿಗಿತ ಎಲ್ಲಾ ಉತ್ತಮ ಕಲಾವಂತಿಕೆ ಸೂಚಿಸುತ್ತಿವೆ ಎಂದಿದ್ದಾರೆ. ಅವರು ತೋರಿಸಿದ ಗುಣ ಎಲ್ಲವೂ ಇವೆ ಎನ್ನುವದರಲ್ಲಿ ಸಂದೇಹವಿಲ್ಲ. ಆದರೆ ಮುಖ್ಯ ಪ್ರಶ್ನೆ ಬರುವದು ಈ ಎಲ್ಲ ಚಿತ್ರಗಳು ಬಿಡಿಯಾಗಿ ಅಥವಾ ಇಡಿಯಾಗಿ ಯಾವ ಜೀವನಾನುಭವ ಅಥವಾ ಭಾವನೆಗಳನ್ನು ಸೂಚಿಸುತ್ತಿವೆ ಎಂಬುದರಲ್ಲಿ. ಈ ಮುಖ್ಯ ವಿಷಯವನ್ನೇ ಲೇಖನದಲ್ಲಿ ಪ್ರಸ್ತಾಪಿಸದೇ ಕಾವ್ಯಕ್ಕೆ ರ್‍ಯಾಂಕ್ ಕೊಡುವದು ಸಮಂಜಸವಲ್ಲ. ಈ ಚಿತ್ರಗಳಾಗಲೀ ಪ್ರತಿಮಾಸಮೂಹಗಳಾಗಲೀ ಭಾವನೆಯ ವಸ್ತು ಪ್ರತಿರೂಪ ಅಥವಾ ಫಾರ್ಮ್ಯುಲಾ ಆಗಿ ಬಂದರೆ ಅಂದರೆ ಜೀವನಾನುಭವದ ಭಾವವಾಹಕವಾಗಿ ಬಂದರೆ ಅದು ಕಾವ್ಯವೇ ಹೊರತು ಚಿತ್ರ ಸೊಗಸಾದರೂ ತನ್ನಿಂದಲೇ ಕಾವ್ಯವಾಗುವದಿಲ್ಲ. ಸಂಕಲನದ ಕವಿತೆಗಳಲ್ಲಿ ಅನುಭವ ಇದೆಯೋ ಇಲ್ಲವೇ ಎಂಬುದು ಇಲ್ಲಿ ಅಪ್ರಸ್ತುತ. ಕವಿತೆಯ ವಿಮರ್ಶೆ ಮಾಡಿದವರೇ ಹೇಳಬೇಕಾದ ವಿಷಯ ಅದು; ಅದು ಪ್ರಮುಖ ಕಾರ್ಯ. ಅದನ್ನು ಬಿಟ್ಟು ಉಳಿದದ್ದನ್ನೆಲ್ಲ ಹೇಳಿದರೆ ಕುದುರೆಯ ಮುಂದೆ ಬಂಡಿ ಕಟ್ಟಿದಂತಾಗುತ್ತದೆ. ಈ ಸಂದರ್ಭದಲ್ಲಿ ಸುಪ್ರಸಿದ್ಧ ಅಮೇರಿಕನ್ ಕವಿ ವಾಲೇಸ್ ಸ್ಟಿವನ್ಸ್ ಇವರ "Thirteen ways of looking at blackbird" ಎಂಬ ಕವಿತೆಯನ್ನು ಆದರ ವಿಮರ್ಶೆಯನ್ನೂ ನೋಡುವದು ತುಲನೆಗೆ ಅಭ್ಯಾಸಯೋಗ್ಯ. ಕಟ್ಟಕಡೆಗೆ ಯಾವ ಪ್ರಾಯೋಗಿಕ ಸಾಧನ ಬಳಸಿದರೂ ಅವೆಲ್ಲ ಅನ್ಯ ಗುರಿಗೇ, ಆ ಅನ್ಯಗುರಿ ಎಂದರೆ ಅನುಭವ ನಿರೂಪಣೆ ಎಂಬುದು ಯಾವ ಕಾಲಕ್ಕೂ ಮರೆಯಲಾಗದು, "For a training in poetic means is of value only that we may respond more fully to the ends of poetry, which must always be its communication of human experience" ಎಂದು ಎಲಿಜಬೆಥ್ ಡ್ರ್ಯೂ ಇವರು ಎಂದದ್ದನ್ನು ನೆನಪಿಸಿಕೊಳ್ಳಬಹುದು. ತಿರುಮಲೇಶರ 'ಮುಖಾಮುಖಿ' ಯಲ್ಲೂ ಸೊಗಸಾದ

ಚಿತ್ರಗಳಿವೆ. ಜೀವನಾನುಭವವನ್ನು ಒಳಗೊಂಡೂ ಸಹ. ಆದರೂ ಇನ್ನೊಬ್ಬ ಹಿರಿಯ ವಿಮರ್ಶಕರು ಅದು ನವ್ಯದ ಅವಸಾನ ಸೂಚಿಸುತ್ತದೆ ಎಂದರೆ, 'ಸೂರ್ಯ ಇವನೊಬ್ಬನೇ' ಪ್ರಥಮ ರ್‍ಯಾಂಕ್ ಪಡೆದಿದೆ !

ಇಷ್ಟೆಲ್ಲ ಹೇಳಿದ್ದು ಈ ಹಿರಿಯ ವಿಮರ್ಶಕರ ಟೀಕೆಗಾಗಿ ಅಲ್ಲ. ಸದ್ಯ ಗೊಂದಲಪುರವಾದ ಕಾವ್ಯ ವಿಮರ್ಶೆಯನ್ನು ಇನ್ನೂ ಗೊಂದಲಮಯವಾಗಿ ಮಾಡುತ್ತದೆ ಎಂಬುದಕ್ಕಾಗಿ. ಇಂದು ಬೇಕಾದದ್ದು ಸರ್ಟಿಫಿಕೇಟು ಹಂಚುವ ಅಥವಾ ಲೇಬಲ್ಲು ಹಚ್ಚುವ ವಿಮರ್ಶೆಯಲ್ಲ. ವಿಮರ್ಶೆ ಪ್ರಥಮತಃ ರಸಗ್ರಹಣ ಅಂದರೆ ಕಾವ್ಯದಲ್ಲಿಯ ಗುಣಗಳ ಅನುಭವಸ್ವರೂಪದ ಮತ್ತದರ ಗುಣಮಟ್ಟದ ತಿಳುವಳಿಕೆ ರೂಪಿಸಿಕೊಂಡು ಅದರ ಸ್ವಾರಸ್ಯಕ್ಕೆ ಸೌಂದರ್ಯಕ್ಕೆ ಸ್ಪಂದಿಸುವದು. ಅನಂತರ ಅದು ಶ್ರೇಷ್ಠವೋ ಜ್ಯೇಷ್ಠವೋ ನಿರ್ಧರಿಸುವದು; ಅದು ಚರ್ಚಾಸ್ಪದವಾಗಿಯೇ ಇರುವಂಥದು. ನಮ್ಮಲ್ಲಿ ಮೊದಲೇ ರ್‍ಯಾಂಕ್ ಕೊಟ್ಟು ಅದನ್ನು ಸಮರ್ಥಿಸುತ್ತಾ ಹೋಗುವದೇ ವಿಮರ್ಶೆ ಆಗಿದೆ. ಇದು ಪೂರ್ತಿ ಬದಲಾಗುವ ಕಾಲ ಬಂದಿದೆ. ಅಲ್ಲದೇ ಈ ವಿಮರ್ಶೆಗಳ ವಿಮರ್ಶೆಯೇ ಆಗಬೇಕಾದ ಕಾಲವೂ ಬಂದಿದೆ. ಈ ಸಂದರ್ಭದಲ್ಲಿ 'ನವೋದಯ'ದಲ್ಲಿ ಡಾ. ಶಿವರುದ್ರಪ್ಪನವರು ಹೇಳಿದ್ದು ನೆನೆಯಬಹುದು. "ಇದರ ಜೊತೆಗೆ ಈ ಸಾಹಿತ್ಯವನ್ನು ಕುರಿತು ನಡೆದ ವಿಮರ್ಶೆಯನ್ನು ಮತ್ತೆ ವಿಮರ್ಶಿಸುವ ಕಾರ್ಯವೂ ಇದರಲ್ಲಿ ಸಮಾವೇಶವಾಗಬೇಕಾಗಿದೆ." (ನವೋದಯ, ಪುಟ ೮೧) ಬಂಡಾಯದವರು ವಿಧಾನದ ಕಸರತ್ತಿಗಿಂತ ಭಾವನೆಗೆ ಮಹತ್ವ ನೀಡಿದ್ದು ಕಾವ್ಯಕ್ಕೆ ಒಳ್ಳೇ ತಿರುವು ಬಂದಂತಾಗಿದೆ. ವಸ್ತು-ವಿಧಾನ ಒಂದಕ್ಕೊಂದು ಹೊಂದಿಕೊಂಡು ಐಕ್ಯತೆಯಿಂದ ಧ್ವನಿಪೂರ್ಣವಾದಾಗ ಮಾತ್ರ ಉತ್ತಮ ಕಾವ್ಯದ ಫಸಲು ಬಂದೀತು.

—

## ವಿಜಯಾ ದಬ್ಬೆ

# ನಾಲ್ಕು ಕವನಗಳು

## ೧. ಹೆದರಲೇನಿದೆ ?

ಗರತಿ ಪಟ್ಟ;
ಗತಿಕಾಣದ ರತಿಗೆ.
ಇದು ಇನ್‌ಸ್ಟಂಟ್ ಕಾಫಿಯು ಕಾಲ

ಕರಿಮಣಿ ಸರಕ್ಕೆ
ತಾಳಿ ಇಲ್ಲದ್ದಕ್ಕೆ ಭಯವೆ ?
ಸೆರಗಿಲ್ಲವೆ ?

ಥರಥರದ ಕುಂಕುಮಗಳಿವೆ
ಬೊಟ್ಟಿನ ಸುತ್ತು ದೊಡ್ಡದಾದರೆ
ಗಂಟು ಹೋಗುವುದೇನು ?

ಕಾಲುಂಗುರಕ್ಕೆ ಗೆಜ್ಜೆ ಇದ್ದರೆ
ಕಣ್ಣಿಗಷ್ಟೇ ಅಲ್ಲ
ಕಿವಿಗೂ ಮಾತ್ರ್ಯದೆಯ ಪರಾಕು.

ಮೂಗು ಚುಚ್ಚಲು ಒತ್ತಾಯವಿಲ್ಲ
ಚುಚ್ಚಿದರೆ ಬಳೆಯ ಜತೆ
ಸಾಕ್ಷಿ ನುಡಿದೀತು.

ನೋಡಿದಿರಾ
ಇಷ್ಟಕ್ಕೆ ಹತ್ತು ನಿವಿಷ ಸಾಕು
ಯಾವ ಗೌರಿ ಅರುಂಧತಿ
ನಿಮಗೆ ಸಾಟಿ ?

ನಾಚಬೇಡಿ
ಇದೇನು ನಿನ್ನೆ ಇಂದಿನ ಕಥೆಯಲ್ಲ.

ಹೇದರಲೇನಿದೆ ಹೇಳಿ
ಜಂಗಮರು ದಾಸರು
ಕಾಂಗ್ರೆಸ್ಸಿಗರು ಸಮಾಜವಾದಿಗಳು
ಎಲ್ಲ ನಿಮ್ಮೊಡನಿರುವಾಗ
ಭಯಕ್ಕೆ ದಾರಿಯೆಲ್ಲಿದೆ ಹೇಳಿ

ನಮ್ಮ ನೆನ್ನೆ ಇಂದು ನಾಳೆಗಳನ್ನು
ನಿಮಗೆ ಧಾರೆ ಎರೆದಿದ್ದೇವೆ.



## ೨. ಒಂದು ವಚನದೊಡನೆ

ನಾನು ಕೇಳಿರಲಿಲ್ಲ :
'ಸಮುದ್ರದ ತಡಿಯಲೊಂದು'
ಆ ಮೇಲೆ
ಯಾರೋ ಹಾಡಿರಬೇಕು
ಕಿವಿಯ ಮೇಲೆ ಬಿದ್ದ ನೆನಪು.

ಆಮೇಲೊಮ್ಮೆ
ನಮ್ಮ ಪತ್ರದೊಳಗೇ
ನುಸುಳಿ ಬಂತು
ಅಜ್ಜನ ಕಾಟಕ್ಕೆ
ಬೆಳಗಿನ ಜಾವ ಕೂತು
ಉರುಹೊಡೆದೆ
ನೂರಕ್ಕೆ ನೂರು ಅಂಕ.

ಶ್ರಾವಣದ ಬೆಳಗು
ಮೋಡ ಕವಿಯದ ಮುಗಿಲೂ
ಹಿತವಾದ ಬಿಸಿಲೂ
ಸುತ್ತ ಹಸಿರು

ಹಿತ್ತಿಲ ತುಂಬಿತ್ತು;
ಮಲ್ಲಿಗೆ ಗುಲಾಬಿಯ ಕಂಪು.

ಸಡಗರದ ಸಂಜೆಗಳು
ಸರಿದು ದಾರಿಮಾಡಿತ್ತು;
ವೈಶಾಖದ ಧಗೆಗೆ
ನೆನಪಾಯಿತು ಯಾಕೋ
'ಸಮುದ್ರದ ತಡಿಯಲೊಂದು.'

ಒಳಗುದಿಯ ನೀರಾಗಿ
ಸುರಿದಂಥ ಬೆವರು
ಮೈಯುದ್ದ ಎದ್ದ ಧಗೆ,
ಸುಡುವ ನೆತ್ತಿಯ ಮೇಲೆ
ಕಾದ ಮರಳು.

ಹತ್ತಿರ ಬಂದು
ಜತೆಗೆ ನಡೆದು
ಕಣ್ಣ ಹನಿಯ ಒರೆಸಿ
ಬೆನ್ನ ಸವರಿತ್ತು:
'ಸಮುದ್ರದ ತಡಿಯಲೊಂದು.'

●

## ೩. ಸ್ಪಂಜು

ಮೆತ್ತೋ ಮೆತ್ತಗೆ
ಹಸಿ ನೆತ್ತಿ ಒತ್ತಿದಂತೆ
ಅದುಮಿದರೆ ಹಿಡಿಬೆಳ್ಳಿ
ಸರಕ್ಕನೆ ನೀರು ಹೀರುವ ಮೋಜು.
ರೆಪ್ಪೆ ಮಿಟುಕಿನೊಳಗೆ
ಸ್ಲೇಟಮೇಲಿನ ನೀರು ಮಂಗಮಾಯ!
ಭೂಗೋಳ ಬರದಾಗ
ಮ್ಯಾಪಿನ ಬಂಗಾಳಕೊಲ್ಲಿಗೆ
ಅದನಿಟ್ಟುಬಿಡುವ ಸಿಟ್ಟು ಸಂಭ್ರಮ.

ಬಳಪದಿಂದ ಪೆನ್ಸಿಲ್ಲು
ಪೆನ್ಸಿಲ್ಲಿನಿಂದ ಪೆನ್ನು
ಫ್ರಾಕು ಲಂಗ ದಾವಣಿ ಸೀರೆ
ನಾಚುವ ಅಂಜುವ ನಟಿಸುವ
ನೂರುಸಿಕ್ಕಿನ ನಡುವೆ ನುಸುಳಿದಂತೆ
ಅದು ನನ್ನಿಂದ ದೂರ ಸರಿಯಿತು.

ಅಮ್ಮನ ದೇವರ ಗೂಡಿಂದ
ಅಪ್ಪನ ಕಪಾಟಿಗೆ
ಅಲ್ಲಿಂದ
ನನ್ನಕ್ಕನ ಮಂಗಳ ಇತರ ಕೆಲಸಕ್ಕೆ
ಓಡಾಡಿತು.
ಈಗದರ ಸಾಮ್ರಾಜ್ಯ;
ಕೊಟ್ಟಿಗೆ ಅಟ್ಟದಲ್ಲಿ
ಒಂದೇ ಪ್ರಶ್ನೆ; ಎಸೆಯುವುದೆಂದು ?

ಮೇಲೆ ಬಿದ್ದ ನೀರು
ಹರಿಯುತ್ತಿದೆ ದಿಕ್ಕಿಲ್ಲದೆ,
ಲೋಕವನ್ನೇ ಬಾಚಿ ತಬ್ಬಲು
ಹೆಣಗಿದ ಅಜ್ಜಿ
ಕೈಚೆಲ್ಲಿ ಮಲಗಿದಳು.

ಜಗಲಿಯಂಚಿನಲಿ ಕುಳಿತ
ಅಜ್ಜನ ಹಿಂದೆ ನಿಂತ
ನಾನು
ಅದಿದ್ದ ನನ್ನ ಚೀಲವನ್ನು
ತಡಕಾಡುತ್ತೇನೆ
ಎಂಥದೋ ನೋವು.

●

## ೪. ಮಿರುಗುವ ಗೋರಿಗಳು

ಹುಟ್ಟುವತನಕ ಯಾರು ಕಾಯುತ್ತಾರೆ ?
ಭ್ರೂಣದ ಮೇಲೆ ಕನಸ ಮೂಟೆಗಳು

ಕನಸ ಮೂಟೆಗಳ ಮೇಲೆ ಭ್ರೂಣಗಳು
ಹುಬ್ಬೇರಿಸುತ್ತೀರಾ ?

ಒಳಗಿನ ಈ ಕೂಸು
ಹೊರಬರುವುದನ್ನು ಕಾದರು
ಗೋರಿಕಾಣದ ಕೂಸು
ಒಂದೇ ಸಮ ಉಸಿರಾಡಿತು
ಕೀರಿ ಕೀರಿ ಅತ್ತಿತು
ನಂಬಿದ ಜನರಿಗಾಗಿ

ತನ್ನ ಮಗನಿಗೆಂದು ಬಂದ
ಈ ಹೆಣ್ಣನ್ನು
ಅತ್ತೆ ತನ್ನ ಮಡಿಲಿನಲ್ಲಿ
ಹಾಕಿಕೊಂಡಳು.
ಕಿಲ್ ಕಿಲ್ ನಕ್ಕು
ಪಿಳಿಪಿಳಿ ಕಣ್ಣಾಡಿಸಿತು
ಅವಳ ಅಳಿಸಲಾಗದೆ.

ಬಿಸಿ ಕಡುಬುಗಳು
ಗಂಟಲಿಳಿಯುವಾಗ
ಅಮ್ಮನ ಭರವಸೆಗಳು
ಗಂಟಲ ಹಿಡಿದು ಗುದ್ದತೊಡಗಿದವು
ತೆರೆದ ಬಾಯಿ ತೆಪ್ಪಗಾಯಿತು.

ವರ್ಷದ ಮೇಲೆ ವರ್ಷ
ಯುಗಾದಿಗೊಂದು ಹೊಸ ಲಂಗ
ಬಗಲಿಗೊಂದು ಬ್ಯಾಗು
ತಲೆಗೊಂದು ಗುಲಾಬಿ
....ನಿಲ್ಲದೆ....ಓಡಿತು.

ಬೆಳಗು ಕಳೆದು ಹತ್ತು ಹೊಡೆಯುವಾಗ
ರಸ್ತೆಯಲಿ ಜನಸಂದಣಿ ಹೆಚ್ಚುತ್ತಿತ್ತು.

ಮನೆತನದ ಕೀರ್ತಿಗೆ
ಕೊಟ್ಟ ಭಾಷೆಗೆ

ನಂಬಿ ನೋಡಿದರು
ಎರಡು ದಿನ
ಕತ್ತಲ ಕೋಣೆಯಲಿ ಬಿಕ್ಕಿತು.

ಗೆಳೆಯರ ಕನಸ ಕುಂಚಿಗೆಗೆ
ಇದನು ಸೀಳಿದ ನೂಲು
ಅವರ ಜೀವ ಇದರೊಳಗೆ ಹುಗಿದು
ಅಪ್ಪಿದ ಸಂಕಟದಿ ಬೇಯುವಾಗ
ಒಡೆದ ಪಾಪೆಯು ಮುಂದೆ;
ಮಾತಿನ ಹೆಣ ಮಲಗಿತ್ತು.

ಉದುರಿದ
ನಲವತ್ತು ವಸಂತಗಳ
ರೆಪ್ಪೆ ಕೂದಲ
ಸೀಳುತ್ತಾ ಕುಳಿತ
ಅರೆಮುದುಕಿಯು ಮುಂದೆ
ಕಣ್ಣು ಹೊಡೆಯುತ್ತಿದೆ;
ಮಿರುಗುವ ಗೋರಿ.

●

ಸೃಜನವೇದಿ: ೧೫, ಏಪ್ರಿಲ್ ೧೯೮೪ : ೨೯

ಡಾ. ಎಸ್. ಎಸ್. ಕುಲಕರಣಿ

# ಕಾವ್ಯ ಹಾಗು ಕಾವ್ಯಾಂತರ್ಗತ ಪ್ರಚಲಿತ ಪರಿಕಲ್ಪನೆಗಳು

## ೧. ಪರಿಕಲ್ಪನೆಗಳ ಹಿನ್ನೆಲೆ

ಕನ್ನಡ ಭಾಷೆ, ಕನ್ನಡ ಸಾಹಿತ್ಯ, ಕಲೆ, ಸಂಸ್ಕೃತಿ ಇವು ಆರಂಭದಿಂದಲೇ ಸಮಗ್ರ ಭಾರತದ ಕಲಾತ್ಮಕ ಸಂಸ್ಕೃತಿಯಿಂದ ಪ್ರಭಾವಗೊಂಡು ಬೆಳೆಯುತ್ತ ಬಂದಿವೆ ಐತಿಹಾಸಿಕವೊ ಆಕಸ್ಮಿಕವೊ ಎನ್ನಿಸುವ ಕಾರಣಗಳಿಂದಾಗಿ ಭಾರತದ ಸಮಸ್ತ ಜನಜೀವನದಲ್ಲಿ ಅಳವಡಿಸುತ್ತ ಬಂದಿರುವ ಎಲ್ಲ ಸಾಹಿತ್ಯಿಕ, ಕಲಾತ್ಮಕ, ಸಾಂಸ್ಕೃತಿಕ ವಿಚಾರ-ಸಿದ್ಧಾಂತಗಳೂ, ನಂಬಿಕೆ-ಅನಿಸಿಕೆಗಳೂ ಕನ್ನಡ ಸಾಹಿತ್ಯದಲ್ಲಿ ಸಹಜವಾಗಿಯೆ ರೂಢಿಗತವಾಗುತ್ತ ಬಂದಿವೆ ಕಾವ್ಯ, ಸಾಹಿತ್ಯ, ಕಲೆ ಎಂದರೇನು; ಅದರ ವಿವಿಧ ಘಟಕ, ರೂಪ, ಪ್ರಕಾರ, ವರ್ಗೀಕರಣಗಳಾವು; ಅವುಗಳ ವ್ಯಾಖ್ಯೆ, ಸ್ವಭಾವ, ವರ್ತನೆ, ಪ್ರಯೋಜನ ಏನು; ಕಾವ್ಯ, ಸಾಹಿತ್ಯ, ಕಲೆಯ ಅಂತಿಮ ಧ್ಯೇಯ, ಪರಿಣಾಮವೇನು; ಅದಕ್ಕೂ ನಿತ್ಯದ ಜೀವನಕ್ಕೂ ಇರುವ ಇರಬೇಕಾದ ಸಾಮ್ಯ ಸಾಮಂಜಸ್ಯವೇನು, ಇವೇ ಮುಂತಾದ ಮೂಲಭೂತ ಸಮಸ್ಯೆಗಳ ಬಗೆಗೆ ಸಮುಚ್ಚಯ ಭಾರತದಲ್ಲಿ ಎರಡು ಸಾವಿರಕ್ಕೂ ಮಿಕ್ಕಿದ ಕಾಲದಿಂದ ನಡೆಯುತ್ತ ಬಂದಿರುವ ಚರ್ಚೆ, ಅಂಗೀಕರಿಸಲಾಗುತ್ತಿರುವ ನಿರ್ಣಯಗಳು ಕನ್ನಡ ನಾಡಿನ ಕಾಡಿನ ಕಾವ್ಯ, ಸಾಹಿತ್ಯ, ಕಲೆಗೂ ಅನ್ವಯಿಸುತ್ತ ಬಂದಿವೆ. ಈ ಪರಿಸ್ಥಿತಿಯಿಂದಾಗಿ, ಕನ್ನಡದಲ್ಲಿರುವ ಸಾಹಿತ್ಯ, ವಿಮರ್ಶಾಪರಂಪರೆ ಬಹುಮುಖವಾದದ್ದು; ಭಾರತೀಯವೆನ್ನಿಸಿಕೊಳ್ಳುವ ರೀತಿ, ನೀತಿ, ಸಿದ್ಧಾಂತಗಳನ್ನಷ್ಟೇ ಅಲ್ಲದೆ, ಭಾರತೇತರ ದೇಶಗಳಿಂದ ಬಂದು ಸೇರಿರುವ, ಸೇರುತ್ತಲಿರುವ ತತ್ತ್ವ, ವಿಚಾರಗಳನ್ನೂ ಒಳಗೊಂಡದ್ದು. ಏಕಕಾಲದಲ್ಲಿಯೇ ಭಾರತೀಯವೂ ಕನ್ನಡವೂ ಎನ್ನಿಸಿಕೊಳ್ಳುವ ಈ ಪರಂಪರೆ, ಈ ಕಾರಣದಿಂದಾಗಿ ಬಲು ಸಂಕೀರ್ಣ, ಸಮನ್ವಯಶೀಲ. ಆದರೆ ಆಧುನಿಕ (ನವೋದಯೋತ್ತರ) ಕನ್ನಡ ಸಾಹಿತ್ಯದಲ್ಲಿ ಈ ಸಮನ್ವಯಶೀಲತೆಯೇ ಪಲ್ಲಟಗೊಂಡು, ಸಂಕೀರ್ಣತೆಯ ಹೆಸರಿನಲ್ಲಿ, ವೇಷದಲ್ಲಿರುವ ಸಂಕರವೊ ಗೊಂದಲಮಯತೆಯೊ ಎನ್ನುವ ಸ್ಥಿತಿಗೆ ಸಾಕಷ್ಟು ಆಸ್ಪದಕೊಟ್ಟಂತಾಗಿದೆ. ಈ ಅಂಶವನ್ನು ಪ್ರಾಮಾಣಿಕತೆಯಿಂದ ಒಪ್ಪಿಕೊಂಡ, ಆದರಿಂದಾಗುವ ಹಾನಿಯನ್ನು ಹೋಗಲಾಡಿಸುವ ಸುಸಂಬದ್ಧ ಪ್ರಯತ್ನಕ್ಕೆ ತೊಡಗಬೇಕಾದದ್ದು ಇಂದು

ಅಗತ್ಯ. ಈ ಮಹತ್ವದ ಸಾಹಿತ್ಯಿಕ-ವಿಮರ್ಶಾತ್ಮಕ ಹೊಣೆಯನ್ನು ಮನಗಾಣಲು ಉದಾಹರಣೆಗಾಗಿ, ಭಾರತೀಯ ಪರಂಪರೆಯಲ್ಲಿ ಇದುವರೆಗೆ ಜರುಗಿರುವ "ಕಾವ್ಯ" ಎಂಬ ಕಲ್ಪನೆಯ ವಿಕಾಸವನ್ನೇ ಪರಿಶೀಲಿಸುವಾ. ಕಳೆದ ಶತಮಾನದ ಮಧ್ಯದ ವರೆಗೂ ಕನ್ನಡಿಗರನ್ನೊಳಗೊಂಡು ಎಲ್ಲ ಭಾರತೀಯ ಸಾಹಿತಿ-ಕಲಾವಿದ-ವಿಮರ್ಶಕರೂ ಅಭಿಜಾತ ಸಂಸ್ಕೃತ ಸಾಹಿತ್ಯಜಗತ್ತಿನಲ್ಲಿ ಮಾನ್ಯವಾಗಿದ್ದ (ಭರತ, ಲೊಲ್ಲಟ, ಶಂಕುಕ, ಭಾಮಹ, ದಂಡಿ, ರುದ್ರಟ, ಭಟ್ಟ ನಾಯಕ, ಆನಂದವರ್ಧನ. ಅಭಿನವ ಗುಪ್ತ. ಕುಂತಕ. ಮಮ್ಮಟ. ಜಗನ್ನಾಥ ಮೊದಲಾದವರ) ತತ್ತ್ವ-ಸಿದ್ಧಾಂತ-ನಿರ್ಣಯಗಳನ್ನೇ ಮೈಗೂಡಿಸಿಕೊಂಡಿದ್ದರಾಗಿ, "ರಸಾತ್ಮಕವಾದದ್ದೇ ಕಾವ್ಯ" ಎಂಬಂಥ ಸಂಸ್ಕೃತ ವಾಙ್ಮಯಿಷ್ಠ ಪರಿಕಲ್ಪನೆಗಳನ್ನಲ್ಲದೇ, ಕಾವ್ಯವೆಂಬುದು "ದೃಶ್ಯ"ವೂ ಹೌದು, "ಶ್ರಾವ್ಯ"ವೂ ಹೌದೆಂದೂ, ಶ್ರಾವ್ಯಕಾವ್ಯವು ಗದ್ಯದಲ್ಲೂ ಇರಬಹುದು ಪದ್ಯದಲ್ಲೂ ಇರಬಹುದೆಂಬ ವಿಚಾರಗಳನ್ನೂ ಸ್ವೀಕರಿಸಲಾಗಿತ್ತು. ಈ ಸಂದರ್ಭದಲ್ಲಿ ಪ್ರಯೋಗಿಸಲಾದ "ಕಾವ್ಯ" ಎಂಬ ಪದವು "ಸಾಹಿತ್ಯ" ಅಥವಾ "ವಾಙ್ಮಯ" ಎಂಬ ವ್ಯಾಪಕ ಪದಕ್ಕೆ ಸಮಾನವಾದದ್ದೆಂಬುದು ಸುಸ್ಪಷ್ಟ. ಆದರೆ ಕಳೆದ ಶತಮಾನದ ಉತ್ತರಾರ್ಧ, ಈ ಶತಮಾನದ ಆರಂಭದಲ್ಲಿ ಭಾರತದ ವಿವಿಧ ಕ್ಷೇತ್ರೀಯ ಸಾಹಿತ್ಯಗಳು ನವೋದಯದ ಆಂದೋಲನಕ್ಕೊಳಗಾದಾಗ ತಮ್ಮ ವಿಮರ್ಶಾ ವಿಚಾರಗಳಲ್ಲಿ ಆಂಗ್ಲ, ಪಾಶ್ಚಾತ್ಯ ವಿವೇಚನೆಯೊಳಗಿದ್ದ ಪರಿಕಲ್ಪನೆಗಳನ್ನು ಬರಮಾಡಿಕೊಳ್ಳತೊಡಗಿದಾಗಿನಿಂದ, "ಕಾವ್ಯ" ಎಂಬ ಪರಿಕಲ್ಪನೆಯ ಪರಂಪರಾಗತ ವ್ಯಾಪ್ತಿ ಸಂಕುಚಿತವಾಗುತ್ತ ಸಾಗಿ, ಸದ್ಯದ ಪ್ರಚಲಿತ ಪ್ರಯೋಗದ ಮೇರೆಗೆ ಅದು ಆಂಗ್ಲಭಾಷೆಯಲ್ಲಿಯ Poetry ಎಂಬ ಪದದ ಪರಿಭಾಷೆಯಾಗಿಬಿಟ್ಟು, ಪದ್ಯ, ಕವಿತೆ, ಕವನ ಎಂಬ ಸೀಮಿತ ಪರಿಕಲ್ಪನೆಯನ್ನು ತಾಳಿದೆ. ಫಲವಾಗಿ, "ಕಾವ್ಯ" ಎಂಬ ಪದವನ್ನು ಭಾರತೀಯ ನವೋದಯ ಪೂರ್ವದ ಹಾಗು ನವೋದಯೋತ್ತರ ಕಾಲದ ಭಿನ್ನ ಸಂದರ್ಭಗಳಲ್ಲಿ ಪ್ರಯೋಗಿಸುವಾಗ ದಕ್ಷತೆಯಿಂದ ವ್ಯಕ್ತಪಡಿಸಬೇಕಾದ ಸ್ಪಷ್ಟತೆಯನ್ನು ಎತ್ತಿ ತೋರಿಸುವ ಪರಿಪಾಠ ಬೆಳೆಯುತ್ತಿಲ್ಲ. ಅದೇ ರೀತಿಯ ಇತರ ಉದಾಹರಣೆಗಳೆಂದರೆ, ಕಳೆದ ಒಂದು ನೂರು ವರ್ಷಗಳ ಅವಧಿಯಲ್ಲಿ ಭಾರತೀಯ ಸಾಹಿತ್ಯಗಳೆಲ್ಲ ಪಾಶ್ಚಾತ್ಯ ವಿವೇಚನಾಪ್ರಣಾಲಿಯಿಂದ ಎತ್ತಿಕೊಂಡಿರುವ Novel (ಕನ್ನಡದಲ್ಲಿ ಕಾದಂಬರಿ), Short Story (ಕತೆ, ಸಣ್ಣ ಕತೆ, ಲಘುಕತಾ) Tragedy, Comedy, Satire, Parody ಮೊದಲಾದ ಹೊಚ್ಚ ಹೊಸ ಸಾಹಿತ್ಯ ಪ್ರಕಾರಗಳನ್ನು ಕುರಿತ ಪರಿಕಲ್ಪನೆ ವಿವೇಚನೆಗಳು. ತಮ್ಮ ತಮ್ಮ ಉತ್ಪತ್ತಿ, ಸ್ವಭಾವ, ವರ್ತನೆ, ಉಪಯುಕ್ತತೆ, ಪ್ರಯೋಗ ಮುಂತಾದ ಎಲ್ಲ ಸಾಹಿತ್ಯಿಕ ಅಂಶಗಳಲ್ಲಿಯೂ ಇವು ಭಾರತೀಯ ಪರಂಪರೆಯಲ್ಲಿ ಮೊದಲೆಂದೂ ಅಸ್ತಿತ್ವದಲ್ಲಿ ಇರದಿದ್ದ ಅಪರಿಚಿತ ವಾಙ್ಮಯರೂಪಗಳು. ಆದರೂ ಸಹ ನಮ್ಮ ವಿಮರ್ಶಾ ಪ್ರಣಾಲಿಯಲ್ಲಿ ಪಶ್ಚಿಮಜನ್ಯ ಈ ಸಾಹಿತ್ಯರೂಪಗಳನ್ನು ಭಾರತೀಯ

ವಾಙ್ಮಯದಲ್ಲಿ ಹಿಂದೆ ಒಮ್ಮೆ ವಿದ್ಯಮಾನವಿದ್ದ, ತತ್ಸಮವೆಂದು ಭ್ರಮಿಸಲಾದ, ರೂಪಗಳೊಡನೆಯೇ ಬೆರೆಯಿಸಿಬಿಡುವ ಅಶಾಸ್ತ್ರೀಯ ಪರಿಪಾಠವಿದೆ. ಪಶ್ಚಿಮ ಸಾಹಿತ್ಯಗಳಲ್ಲಿ ಹುಟ್ಟಿಬೆಳೆದಿರುವ Tragody ಹಾಗು Comedy ಇವು ಭಾರತೀಯ ಪರಂಪರೆಯ ಮೇರೆಗೆ "ದೃಶ್ಯಕಾವ್ಯ"ದ ಪ್ರಕಾರಗಳು. ಅವುಗಳ ಮೂಲ ರೂಪ-ಸ್ವಭಾವಗಳಿಗನುಸರಿಸಿ ಅನುಕ್ರಮವಾಗಿ ಅವನ್ನು "ಗಂಭೀರ ನಾಟಕ", "ಹಾಸ್ಯ ನಾಟಕ" ಎಂಬ ಪರಿಕಲ್ಪನಾಪದಗಳಿಂದ ವರ್ಣಿಸುವದು ಸಾಕಷ್ಟು ಅರ್ಥಪೂರ್ಣವೆನ್ನಿಸೀತು. ಆದರೆ ನಮ್ಮ ಪ್ರಯೋಗ ಪರಂಪರೆಯಲ್ಲಿ ಅವುಗಳನ್ನು ಕುರಿತು ಬಂದು ಸೇರಿರುವ ಪದಗಳೆಂದರೆ ದುಃಖಾಂತ ನಾಟಕ/ರುದ್ರನಾಟಕ/ಶೋಕಾಂತಿಕ ಹಾಗು ಸುಖಾಂತ ನಾಟಕ ಎಂಬವುಗಳು. ಪಾಶ್ಚಾತ್ಯ ಸಂಸ್ಕೃತಿಯಲ್ಲಿ Epic ಎಂಬ ಪರಿಕಲ್ಪನಾ ಪದವನ್ನು ಹೊಂದಿರುವ, ಹೋಮರ ಕವಿಯ ಕೃತಿಗಳನ್ನು ಹೋಲುವದೆಂಬ, ಮಾತ್ರದಿಂದ ನಾವಿಂದು ನಮ್ಮ ರಾಮಾಯಣ ಮಹಾಭಾರತಗಳನ್ನು Epic ಪದಕ್ಕೆ ಸಮನಾದ "ಮಹಾಕಾವ್ಯ" ಎಂಬ ಪರಿಕಲ್ಪನಾಪದದ ಹೆಸರಿನಲ್ಲಿಯೇ ಗುರುತಿಸುತ್ತೇವೆ. ಆದರೆ ಮೂಲ ಭಾರತೀಯ ಪರಂಪರೆಯಲ್ಲಿ ಈ ಕೃತಿಗಳನ್ನು "ಇತಿಹಾಸ" ಎಂದು ವರ್ಗೀಕರಿಸಲಾಗಿದೆ. ಅದೇ ರೀತಿ, ಪಶ್ಚಿಮದ ಪದ್ಯರೂಪ, Narrative Poetry ಯನ್ನು "ಕಥನಕಾವ್ಯ" ಎಂಬ ಸುಸೂತ್ರ ಹಾಗು ಶಿಥಿಲ ಪರಿಕಲ್ಪನೆಗೆ ಗುರಿಮಾಡಿ, ನಮ್ಮ ಪ್ರಣಾಲಿಯಲ್ಲಿಯೇ ಇರುವ "ಖಂಡಕಾವ್ಯ" ಎಂಬ (ಹೆಚ್ಚು ಅರ್ಥಪೂರ್ಣವೆನ್ನಿಸಬಹುದಾದ) ಪದವನ್ನು ಅದೇಕೋ ನಿರಾಕರಿಸಲಾಗಿದೆ. ಇಂಥ ಶಿಥಿಲ, ಸುಸೂತ್ರತಾಪೂರ್ಣ, ಸ್ಪಷ್ಟತಾವಿಹೀನ ಪರಿಕಲ್ಪನೆಗಳನ್ನು ದಕ್ಷತಾಪೂರ್ಣ ಎನ್ನಿಸದಂಥ ರೀತಿಯಲ್ಲಿ ಬಳಸುವ ಪ್ರಕ್ರಿಯೆ ಕೇವಲ ಭೂತಕಾಲಕ್ಕಷ್ಟೇ ಪರಿಮಿತವಾಗಿಲ್ಲ. ವರ್ತಮಾನ ವಿಮರ್ಶಾ ಪ್ರಣಾಲಿಯಲ್ಲಿ ಕೂಡ ಪಡುವಣದಿಂದ ಬರಮಾಡಿಕೊಳ್ಳಲಾಗುತ್ತಿರುವ ನೂತನತರ ವಾಙ್ಮಯ ಪ್ರಕಾರಗಳ ಪರಿಕಲ್ಪನೆ-ಪ್ರಯೋಗದಲ್ಲಿ ಅದೇ ಬಗೆಯ ಅಸಮಂಜಸ ಅಸ್ಪಷ್ಟತೆ ತಡೆಯಿಲ್ಲದೆ ಮುನ್ನಡೆಯುತ್ತಲಿದೆ. The Theatre of the Absurd ಮೊದಲಾದ ಅತ್ಯಾಧುನಿಕ ನಾಟಕ ಪ್ರಕಾರಗಳ ಕನ್ನಡದಲ್ಲಿಯ ಪಾರಿಭಾಷಿಕ ಶಬ್ದಗಳೇ ಇದಕ್ಕೆ ಸಾಕ್ಷಿ. ಕನ್ನಡಿಸಲಾದ ಇಂಥ ಪದಗಳಲ್ಲಿ ಪರಿಕಲ್ಪನೆಯ ಶಿಲ್ಪದಲ್ಲಿಯ ಯಥಾರ್ಥತೆ, ಸುಭಗತೆ ಸಾಹಿತ್ತಿಕ ವಿಮರ್ಶಾತ್ಮಕ ಗಂಭೀರತೆ ಹುದುಗಿರುವಂತೆ, ಸ್ಪಷ್ಟತೆ ತಾನೇ ತಾನಾಗಿ ಮೇಲೆದ್ದು ಬರುವಂತೆ, ಜಾಗ್ರತೆ ವಹಿಸಲಾಗುತ್ತಿದೆಯೆ ? ನವೋದಯ ಕಾಲದಿಂದ ಈವರೆಗೆ ನಮ್ಮ ಕನ್ನಡ ವಾಙ್ಮಯ ಪ್ರಭಾವಿತತೆಯಿಂದ ಪ್ರಾಯೋಗಿಕತೆಯತ್ತ, ಪ್ರಗತಿಶೀಲತೆಯತ್ತ ನುಗ್ಗಿ ನಡೆತಂದು ಇದೀಗ ಅಪೇಕ್ಷಣೀಯವೆನ್ನಿಸುವ ಪ್ರಗಲ್ಭತೆಯ ಹಂತದಲ್ಲಿ ಕಾಲಿರಿಸುವ ಸುಮುಹೂರ್ತವನ್ನು ಸಮೀಪಿಸುತ್ತಲಿದೆ. ಈ ಗಳಿಗೆಯಲ್ಲಿ ನಮ್ಮ ವಿಮರ್ಶಾಪರಂಪರೆಗೆ ಒಂದು ಹೊಸ ದಿಶೆಯನ್ನು ಕೊಟ್ಟು, ನಮ್ಮ ಪರಿಕಲ್ಪನಾ ವಿಧಾನದಲ್ಲಿ ನಿಕೃಷ್ಟವಾದ, ನಿಷ್ಠುರವಾದ ಪ್ರಾಮಾಣಿ

ಸ್ಪಷ್ಟತೆಗೆ ಇಂಬುಗೊಟ್ಟು ನಮಗೆ ನಾವೇ ಉಪಕಾರವೊಂದನ್ನು ಮಾಡಿಕೊಳ್ಳುವ ಅವಶ್ಯಕತೆ ಇದೆ. ಇಂದು ಪ್ರಚಲಿತವಿರುವ ನಮ್ಮ ಕನ್ನಡ ಸಾಹಿತ್ಯ, ಕನ್ನಡ ವಿಮರ್ಶೆ ಇವೆರಡೂ ಅರನಿವಿಷ ಅಂತರ್ಮುಖಿಯಾಗಿ ಆತ್ಮಪರಿಶೀಲನೆ ಮಾಡಿಕೊಂಡು, ಈವರೆಗೆ ತಮ್ಮ ಕೃತಿಯಲ್ಲಿ ಫಲಿಸಿ ನಿಂತಿರುವ ಎಲ್ಲ ಪರಿಕಲ್ಪನೆಗಳನ್ನು ನಿಷ್ಪಕ್ಷಪಾತಪೂರ್ಣ ಪುನರ್ಮೂಲ್ಯಾಂಕನಕ್ಕೆ ಗುರಿಪಡಿಸಬೇಕಾಗಿದೆ. ಪ್ರಸ್ತುತ ಲೇಖ ಇಂಥ ಪ್ರಾಮಾಣಿಕ ಪುನರ್ವಿಮರ್ಶೆಯ ದಿಶೆಯಲ್ಲಿ ಕನ್ನಡ ಸಾಹಿತ್ಯ ವಿವೇಚನೆ ಇಂದು ಇರಿಸಬೇಕಾದ ಮೊದಲ ಹೆಜ್ಜೆಯ ಒಂದು ವಿನಮ್ರ ಉದಾಹರಣೆ.

ನಮ್ಮ ಸಾಹಿತ್ಯವಿವೇಚನೆಯಲ್ಲಿ ಸದ್ಯ ಬಳಕೆಯಲ್ಲಿರುವ ಪರಿಕಲ್ಪನೆಗಳೆಲ್ಲ ಅಪ್ಪಟ ಭಾರತೀಯವೆನ್ನಿಸುವ ಮೂಲಪರಂಪರೆಗಿಂತ ಹೆಚ್ಚಾಗಿ ಪೂರ್ಣ ಪಾಶ್ಚಾತ್ಯ ಎನ್ನಿಸುವ ಹಿನ್ನೆಲೆಯಲ್ಲಿಯೇ ಹುಟ್ಟಿಬೆಳೆದಂಥವು. ಆದ್ದರಿಂದ ಅವುಗಳ ಸಂಪೂರ್ಣ ಸ್ಪಷ್ಟತೆ, ಸಮರ್ಪಕತೆಯ ಸಮಗ್ರ ಪರಿಶೀಲನೆಗೆ ಪೂರ್ವಭಾವಿಯಾಗಿ ಆಯಾ ಪರಿಕಲ್ಪನೆಗಳ ಮೂಲ ಪಾಶ್ಚಾತ್ಯ ರೂಪದ ಪಾರ್ಶ್ವಭೂಮಿಯನ್ನೂ ಸಾಹಿತ್ತಿಕ-ಸಾಮಾಜಿಕ-ಸಾಂಸ್ಕೃತಿಕ ಸಂದರ್ಭವನ್ನೂ ತಿಳಿದುಕೊಳ್ಳುವದು ಅಗತ್ಯ. ಅಂತಾಗಿ, Poetry ಎಂಬ ಪಾಶ್ಚಿಮಾತ್ಯ ಪದಕ್ಕೆ ಸಮಾಂತರವಾಗಿ, ಪಾರಿಭಾಷಿಕವಾಗಿ ಉಗಮಿಸಿ, ನಮ್ಮ ಪ್ರಚಲಿತ ವಿನಿಮಯದಲ್ಲಿ ಕಾವ್ಯ, ಪದ್ಯ, ಕವಿತೆ, ಕವನ ಎಂಬ ಸಂಜ್ಞೆಯ ಮುಖಾಂತರ ಗುರುತಿಸಲಾಗುತ್ತಿರುವ ಪರಿಕಲ್ಪನೆಯ ಆಂಗ್ಲ, ಪಾಶ್ಚಾತ್ಯ ಹಿನ್ನೆಲೆಯನ್ನು ಮೊದಲು ಪರಿಶೀಲಿಸುವಾ. ಈ ಪರಿಕಲ್ಪನೆಯ ಪ್ರಭಾವ ಭಾರತೀಯ ಸಾಹಿತಿಗಳ ಮೇಲೆ ಬೀಳತೊಡಗಿದ್ದು ಕಳೆದ ಶತಮಾನದ ಕೊನೆಯಲ್ಲಿಯ ಹಾಗು ಸದ್ಯದ ಶತಮಾನದ ಆರಂಭದಲ್ಲಿಯ ಒಂದೆರಡು ದಶಕಗಳಲ್ಲಿ ಕನ್ನಡ ಸಾಹಿತ್ಯವಿವೇಚಕರನ್ನೊಳಗೊಂಡು ಎಲ್ಲ ನವಶಿಕ್ಷಿತ ಭಾರತೀಯರಿಗೂ ಆಗ ಸುಪರಿಚಿತವಿದ್ದದ್ದು ವರ್ಡ್ಸ್‌ವರ್ಥ, ಕೋಲ್‌ರಿಜ್, ಶೆಲಿ, ಕೀಟ್ಸ್, ಟೆನಿಸನ್, ಬ್ರೌನಿಂಗ್, ಆರ್ನಲ್ಡ್, ಪೇಟರ್, ವಾಯಿಲ್ಡ್ ಹಾಗು ಬ್ರಾಡ್ಲೀ ಇಂಥ ಕವಿ, ವಿಮರ್ಶಕ, ವಿವೇಚಕರ ತತ್ತ್ವ ಸಿದ್ಧಾಂತಗಳೇ. ಈ ಸಾಹಿತ್ಯಸಿದ್ಧಾಂತಗಳು ಉದ್ಭವಿಸಿ ಬಂದದ್ದು ಹತ್ತೊಂಭತ್ತನೆಯ ಶತಮಾನದ ಆದಿಯಲ್ಲಿ ಪುನರುಜ್ಜೀವಿತವಾದ ರಮ್ಯತಾವಾದ (Romanticism)ದ ಹಿನ್ನೆಲೆಯಿಂದ ರಮ್ಯತಾವಾದದ ಪುನರುಜ್ಜೀವನಕ್ಕೆ ಸಹಾಯಕಾರಿ ಪ್ರಚೋದನೆ ದೊರೆತದ್ದು ಹದಿನೆಂಟನೆಯ ಶತಕದ ಕೊನೆಯ ಕಾಲುಭಾಗದಲ್ಲಿ, ಹಾಗು ಆಗಿನ ಕ್ರಿಯಾಶೀಲ ಆಂಗ್ಲ ಕವಿಗಳು (ಟಾಮ್ಸನ್, ಕಾಲಿನ್ಸ್, ಗ್ರೇ, ಕೂಪರ್, ಬ್ಲೇಕ್, ಬರ್ನ್ಸ್ ಮ್ಯಾಕ್‌ಫರ್ಸನ್, ಚ್ಯಾಟರ್‌ಟನ್ ಮುಂತಾದವರು) ಅಭಿಜಾತ್ಯ, ನವಾಭಿಜಾತ್ಯ ಕಾವ್ಯಪ್ರಣಾಲಿಯ ವಿರುದ್ಧ ಹೂಡಿದ ಬಂಡಾಯದ ಮುಖಾಂತರ. ೧೬೬೦ ರಿಂದ ೧೭೮೦ರ ವರೆಗಿನ ಕಾಲಾವಧಿಯಲ್ಲಿ ನವಾಭಿಜಾತ್ಯತೆ (Neo-classicism) ಯು ಆಂಗ್ಲ, ಪಾಶ್ಚಾತ್ಯ ಸಾಹಿತ್ಯದ ಮೇಲೆ ಪೂರ್ಣ ಪ್ರಭುತ್ವವನ್ನು ಪಡೆಯುವಲ್ಲಿ ಯಶಸ್ವಿಯಾಗಿತ್ತು. ಅ

ಕಾಲದ ಇಟ್ಯಾಲಿಯನ್ ಹಾಗು ಫ್ರೆಂಚ್ ಮೀಮಾಂಸಕರು ಪ್ರಾಚೀನ ಗ್ರೀಕ್ ಮತ್ತು ಲ್ಯಾಟಿನ್ ವಿಮರ್ಶಕರ, ವಿವೇಚಕರ ಅಭಿಜಾತ್ಯ ತತ್ತ್ವಪ್ರಣಾಲಿಯನ್ನು ಮರುಜೀವಗೊಳಿಸಿ, ಸಮಕಾಲೀನತೆಯ ಹೊಸ ಬೆಳಕಿನಲ್ಲಿ ಅದನ್ನು ಒಂದಿಷ್ಟು ಪರಿಷ್ಕೃತಗೊಳಿಸಿ ಪಾಶ್ಚಾತ್ಯ ಕಾವ್ಯಪ್ರಯೋಗ ಪದ್ಧತಿಯಲ್ಲಿ ತಂದುಕೊಂಡಿದ್ದರು. ಆದರೆ ಹದಿನೆಂಟನೆಯ ಶತಕದ ದ್ವಿತೀಯಾರ್ಧದ ಹೊತ್ತಿಗೆ ಈ ನವಾಭಿಜಾತ್ಯ ಪ್ರಣಾಲಿಯ ನಿಯಮನಿಷ್ಠುರತೆ ಆಂಗ್ಲ ಕಾವ್ಯವನ್ನು ತುಂಬ ಕೃತಕಗೊಳಿಸಿ ರಸಹೀನವನ್ನಾಗಿ ಮಾಡಿತ್ತು. ಅದರ ನಿರ್ಜೀವ ಕೃತಕತೆಯು ಅಸ್ತಿತ್ವದಲ್ಲಿ ತರುತ್ತಲಿದ್ದ ಅರ್ಥಹೀನ ಕವಿತೆ (Poetry)ಗೆ ಬೇಸತ್ತು ಮುಂದಿನ ತಲೆಮಾರಿನ ಆಂಗ್ಲ ಕವಿಗಳು ಆಂದೋಲನವನ್ನು ಮಾಡಿದರು. ಫಲವಾಗಿ, ನವಾಭಿಜಾತ್ಯ ಪ್ರಣಾಲಿಯಲ್ಲಿ ಪ್ರಸಾರಪಡೆದಿದ್ದ ಎಲ್ಲ ಸಾಹಿತ್ತಿಕ ಪರಿಕಲ್ಪನೆಗಳು ಮೂಲಭೂತ ಕ್ರಾಂತಿಗೆ ಬಲಿಯಾದವು. ನವಾಭಿಜಾತ್ಯ ವಿಮರ್ಶಾಪ್ರಣಾಲಿಯು ಕವಿ, ಸಾಹಿತಿ, ಕಲಾವಿದನನ್ನು ಸಮುಚ್ಚಯ ಸಮಾಜದ ಪ್ರಾತಿನಿಧಿಕ ವಕ್ತಾರನೆಂದು ಪರಿಗಣಿಸಿತ್ತು. ತನ್ನ ಕವನ, ಸಾಹಿತ್ಯ, ಕಲೆಯ ಮುಖಾಂತರ ಸುಶಿಕ್ಷಿತರಾದ, ಸುಸಂಸ್ಕೃತರಾದ ಹಾಗು ಸಮಾನ ಧರ್ಮಿಯರಾದ ಅಭಿಜ್ಞ ಶ್ರೋತೃಗಳಿಗೆ, ಓದುಗರಿಗೆ, ರಸಿಕರಿಗೆ ಸಾರ್ವತ್ರಿಕ ಪರಮ ಸತ್ಯವನ್ನು ತಂದೀಯುವುದೇ ಅವನ ಧ್ಯೇಯವೆನ್ನಿಸಿತ್ತು. ಇಂಥ ರಸಿಕರಿರುವ ಸಮಾಜ ಜೀವನದಲ್ಲಿ ಸರ್ವಸಮಾನವೆನ್ನಿಸಿಕೊಂಡಿದ್ದ ಅಂಶಗಳನ್ನು ಆಯ್ದು ಬಣ್ಣಿಸುವದೇ ಕವಿತೆಯ ಧರ್ಮವೆಂದು ವಿಧಿಸಲಾಗಿತ್ತು. ಈ ಕಠೋರ ಸಿದ್ಧಾಂತಗಳನ್ನು ನಿರಾಕರಿಸಿ ರಮ್ಯತಾವಾದಿಗಳು ಹದಿನೆಂಟನೆಯ ಶತಕದ ಉತ್ತರಾರ್ಧದಲ್ಲಿ ಪುನರುಜ್ಜೀವಿತ ರಮ್ಯತಾಪ್ರಣಾಲಿಯಿಂದ ಸ್ಫೂರ್ತವಾದ ತತ್ತ್ವಗಳನ್ನು ಬಳಕೆಯಲ್ಲಿ ತಂದರು. ಅವರ ಸಿದ್ಧಾಂತಗಳ ಮೇರೆಗೆ Poetry (ಕಾವ್ಯ/ಕವಿತೆ/ಕವನ) ಎಂಬುದರ ಉದ್ಗಮಸ್ಥಾನ ಕವಿಯ ವಿಶಿಷ್ಟವಾದ, ಅದ್ವಿತೀಯವಾದ, ಹಾಗು ವ್ಯಕ್ತಿತ್ವನಿಷ್ಠ ಅನುಭವ (ಸಮಷ್ಟಿ ಜೀವನದಲ್ಲಿಯ ಸರ್ವಸಮಾನವಾದ ವೈಶ್ವಿಕ ಅನುಭವವಲ್ಲ); ಕವಿ, ಸಾಹಿತಿ, ಕಲಾವಿದ ಎಂಬವನು ತನ್ನವೇ ಆದ ಇಂದ್ರಿಯಾನುಭವಗಳ (perceptions) ಉತ್ಕಟ ತೀವ್ರತೆಯಿಂದ ಸಂಪನ್ನನಾಗಿರುವ, ತನ್ನ ವೈಯಕ್ತಿಕ ಮನೋವ್ಯಾಪಾರಗಳನ್ನೇ ಕಾವ್ಯ, ಕವಿತೆ, ಕವನದ ಮುಖ್ಯ ಸಾಮಗ್ರಿಯನ್ನಾಗಿ ಉಪಯೋಗಿಸುವಂಥ, ಹಾಗು ತನ್ನ ಸಹಜೀವಿಗಳೆಲ್ಲರಿಗಿಂತ ಅತ್ಯಂತ ಭಿನ್ನನಾಗಿರುವಂಥ, ವ್ಯಷ್ಟಿಘಟಕ (ಸಮುಚ್ಚಯ ಸಮಾಜದ ಪ್ರಾತಿನಿಧಿಕ ವಕ್ತಾರನಲ್ಲ); ಕವಿಯು ಕವಿತಾಸೃಷ್ಟಿ ಮಾಡುವದು (ಸಮಾನ ಧರ್ಮಿಯರಾದ) ಕವಿಗಣಕ್ಕಾಗಿ ಮಾತ್ರವಲ್ಲ, ಲೋಕಸಮಸ್ತರಿಗೆ (ಕೇವಲ ಸುಶಿಕ್ಷಿತ, ಸುಸಂಸ್ಕೃತ, ಅಭಿಜ್ಞ ರಸಿಕ, ಶ್ರೋತೃಗಳಿಗಾಗಿ ಅಲ್ಲ); ನಿತಾಂತ ಪ್ರಾಂಜಲತೆ ಎಂಬ ಒರೆಗಲ್ಲಿನಿಂದ ಮಾತ್ರ ತೀರ್ಮಾನಿಸಿ ತಿಳಿಯಬಹುದಾದ, ಸರ್ವಶಃ ತನ್ನದೇ ಆದ, ಸ್ವಸತ್ವವನ್ನು ಘೋಷಿಸಿ ಚಿತ್ರಿಸುವದೇ ಕಾವ್ಯದ ಉದ್ದೇಶ (ಸಾರ್ವತ್ರಿಕವಾದ ಪರಮ

ಸತ್ಯವನ್ನಷ್ಟೇ ಸಾರುವದಲ್ಲ); ಸುಯೋಗ್ಯವಾದ ಸಂವೇದನೆ, ಅನಿಸಿಕೆ (Feeling) ಯ ಆಳದಿಂದ ಹೊರಹೊಮ್ಮುವುದಾದಲ್ಲಿ, ಇಂಥ ಸೃಜನಶೀಲತೆಯು ಅತ್ಯಮೂಲ್ಯವಾದ ಕವಿತೆಯಾಗಿ ಪರ್ಯವಸಾನಗೊಳ್ಳುವದು ಸುನಿಶ್ಚಿತ ಹೀಗೆ ನವಾಭಿಜಾತ್ಯತೆಯಿಂದ ಬೇರ್ಪಟ್ಟು, ಪುನರುಜ್ಜೀವಿತ ರಮ್ಯತಾ ಪ್ರಣಾಲಿಯು ಒಂದು ಬದಿಯಿಂದ ಸಂವೇದನೆ (Feeling) ಎಂಬ ಕಾವ್ಯಾಂಶಕ್ಕೆ ಮಹತ್ವದ ಪ್ರಾಧಾನ್ಯವನ್ನು ಒದಗಿಸಿತು. "Feeling" ದ ಬಗೆಗೆ ವರ್ಡ್ಸ್‌ವರ್ಥ್ ಕವಿಯು ಮಾಡಿದ ಸುಪ್ರಸಿದ್ಧ ಘೋಷಣೆಗಳು ಇದಕ್ಕೆ ಸಾಕ್ಷಿ.) ಇನ್ನೊಂದು ಬದಿಯಿಂದ ಅದು ಕವಿಯ ಕಲ್ಪನಾಶಕ್ತಿ (Imagination)ಯೇ ಪರಮಶ್ರೇಷ್ಠವಾದ ಕಾವ್ಯಗುಣ ಎಂಬ ಸಿದ್ಧಾಂತವನ್ನು ಸ್ಥಾಪಿಸಿತು. (ಕಲ್ಪನಾಶಕ್ತಿಯನ್ನು ಕುರಿತು ಮೊದಲು ಬ್ಲೇಕ್ ಕವಿ, ಬಳಿಕ ಕೋಲ್‌ರಿಜ್ ಹೇಳಿರುವ ಮಾತುಗಳಲ್ಲಿ ಇದು ವ್ಯಕ್ತವಾಗಿದೆ) ಈ ಕಾರಣದಿಂದಾಗಿ, ಭಾವಕಾವ್ಯ (Lyric) ವು ಪುನರುಜ್ಜೀವಿತ ರಮ್ಯ ಪ್ರಣಾಲಿಯಲ್ಲಿ ಅಗ್ರಸ್ಥಾನ ಪಡೆದ ಕವಿತಾಪ್ರಕಾರವಾಯ್ತು. ಅಲ್ಲದೆ ಕಾವ್ಯ, ಕಾವ್ಯಪ್ರಕಾರಗಳ ವಿವಿಧ ರೂಪಗಳು, ಕಾವ್ಯಯೋಗ್ಯತಾಭಾಷೆ-ಶೈಲಿ-ಅಲಂಕಾರವಿಧಾನಾದಿ ಕಾವ್ಯಾಂತರ್ಗತ ಘಟಕಗಳು ಇಂಥ ವಿಷಯಗಳ ಬಗೆಗೆ ರಮ್ಯತಾನಿಷ್ಠ ತತ್ತ್ವ-ಸಿದ್ಧಾಂತಗಳೇ ಆಗಿನಿಂದ ರೂಢಿಗತವಾಗತೊಡಗಿದವು. ಪ್ರಕೃತಿಸೌಂದರ್ಯದಲ್ಲಿ ಅಂತರ್ನಿಹಿತವಾದ ಗೂಢ ಹಾಗು ಮಂಗಲಮಯ ದೈವಿಕತೆ, ಭೌತಿಕ ಜಗತ್ತಿನಲ್ಲಿಯೇ ಅನುಭವಕ್ಕೆ ಬರುವ ಅದ್ಭುತರಮ್ಯ ಅಧಿಭೌತಿಕಶಕ್ತಿ (The Supernatural); ಪ್ರಕೃತಿಯ ಮಡಿಲಲ್ಲಿ, ಹುಟ್ಟಿ-ಬೆಳೆಯುವ ಹುಲ್ಲು-ಹೂವು, ಗಿಡ-ಮರ, ಜಿಂಕೆ-ಮೊಲ ಮತ್ತು ಮುಗ್ಧ ನಿಷ್ಕಲ್ಮಷಸ್ವಭಾವದ ಮಾನಜೀವಿಗಳು (the unsophisticated); ಸೃಷ್ಟಿಮಾತೆಯ ಸಮ್ಯಕ್ ಸ್ಪರ್ಶ-ಸಂಪರ್ಕದಿಂದಾಗಿ ಗ್ರಾಮ್ಯಜೀವಿಗಳ ದೈನಂದಿನ ಸಂಭಾಷಣೆಯಲ್ಲಿ ಸ್ವಯಂಸ್ಫೂರ್ತವಾಗಿ ಜನಿಸುವ ಸರಲ ಭಾಷೆ; ಈ ಎಲ್ಲ ಅಂಶಗಳಿಗೆ ಹೊಸ ನಿಲುವು ಗುತ್ರ ದೊರೆಯುತೊಡಗಿದವು. ಗಮನಾರ್ಹವೆನ್ನಿಸುವ ಕೆಲವು ಸ್ಥಿತ್ಯಂತರಗಳಿಗೆ ಗುರಿಯಾದರೂ ಕೂಡ, ಇದೇ ಪ್ರಣಾಲಿಯು ಸಾಹಿತ್ಯವಿವೇಚನೆ ಹತ್ತೊಂಭತ್ತನೆಯ ಶತಕದುದ್ದಕ್ಕೂ ಬೆಳೆಯುತ್ತ ಹೋಯ್ತು. ಹಿಂದಿನ ಶತಕದ ಉತ್ತರಾರ್ಧಕಾಲದಿಂದಲೂ ಪಾಶ್ಚಾತ್ಯಮೂಲದ ಅಧ್ಯಾಪನ ವ್ಯವಸ್ಥೆಯ ಮುಖಾಂತರ ಶಿಕ್ಷಣ ಪಡೆದು ಪದವೀಧರರಾದ ಭಾರತೀಯರೆಲ್ಲ, ಹೆಚ್ಚು-ಕಡಮೆ ದ್ವಿತೀಯ ವಿಶ್ವಯುದ್ಧ ಆರಂಭಕಾಲದ ವರೆಗೂ, ಇದೇ ರಮ್ಯತಾವಾದಿ ಆಂಗ್ಲ, ಪಾಶ್ಚಾತ್ಯ ವಿವೇಚನೆಯನ್ನೇ ಮೈಗೂಡಿಸಿಕೊಂಡರು. ಅಂತೆಯೇ, ಭಾರತದ ವಿವಿಧ ಕ್ಷೇತ್ರೀಯಭಾಷೆ (reginal language)ಗಳ ನವೋದಯ ಕಾಲದಲ್ಲಿ ಈ ಪಾಶ್ಚಾತ್ಯ ಪ್ರಣಾಲಿ ಬೃಹತ್ ಭಾರತೀಯ ಪರಂಪರೆಯಲ್ಲಿ ಬಂದು ಸೇರುವಂತಾಯ್ತು. ಆದರೆ, ನಮ್ಮ ಆ ಮೊದಲಿನ ಮೂಲಭಾರತೀಯ ಅಭಿಜಾತ್ಯ ಪ್ರಣಾಲಿಗಿಂತ ಈ ಆಂಗ್ಲ ಪ್ರಣಾಲಿ ತೀರ ಭಿನ್ನವಾಗಿದ್ದರಿಂದ ನಮ್ಮ ಕಾವ್ಯ,

ಸಾಹಿತ್ಯ, ವಿಮರ್ಶಾಪರಂಪರೆಯಲ್ಲಿ (ಈ ಮೊದಲೇ ಹೇಳಿರುವಂತೆ) ಅದು ನಮಗರಿಯದಂತೆ ನಮ್ಮ ಸಾಹಿತ್ಯಿಕ ಪರಿಕಲ್ಪನೆಗಳ ಯಥಾರ್ಥ ಹಾಗು ಸ್ಪಷ್ಟ ಜ್ಞಾನದಲ್ಲಿ ಗೊಂದಲಮಯತೆ, ಅಸ್ಪಷ್ಟತೆ, ಶಿಥಿಲತೆ, ಸಸೂತ್ರತೆ ಹುಟ್ಟಿಸಿಕೊಳ್ಳುವದಕ್ಕೆ ಕಾರಣವಾಯ್ತು.

ನಮ್ಮ ದೇಶದಲ್ಲಿ ರಾಮಮೋಹನ ರಾಯ ಹಾಗು ಮೆಕಾಲೆ ಇವರ ತೀರ್ಮಾನದ ಮೇರೆಗೆ ಆರಂಭಿಸಲಾದ ಪಶ್ಚಿಮನಿಷ್ಠ ವಿದ್ಯಾದಾನಪದ್ಧತಿಯ ದೋಷಪೂರ್ಣತೆಯಿಂದಾಗಿ ಈ ಪರಿಕಲ್ಪನಾತ್ಮಕ ದುಃಸ್ಥಿತಿ, ಒಂದು ದೃಷ್ಟಿಯಿಂದ, ಅನಿವಾರ್ಯವಿತ್ತೆಂದೇ ಹೇಳಬೇಕು. ಏಕೆಂದರೆ, ಹತ್ತೊಂಭತ್ತನೆಯ ಶತಕದ ಕೊನೆ ಇಪ್ಪತ್ತರ ಆರಂಭದ ಹೊತ್ತಿಗೆಂದರೆ ಆ ಅಧ್ಯಾಪನಕ್ರಮದ ಮೇರೆಗೆ ಕ್ಷೇತ್ರೀಯ (vernacular) ಭಾಷೆ ಸಾಹಿತ್ಯಗಳ ಅಭ್ಯಾಸಕ್ಕಾಗಿ ನಿರ್ಮಿಸಿ ವಿಧಿಸಲಾದ ಪಾಠ್ಯಕ್ರಮದಲ್ಲಿ ಅಭಿಜಾತ್ಯ ಕಲಾವಿವೇಚನಾಪದ್ಧತಿಗೇನೇ ಸ್ವಾಭಾವಿಕವಾಗಿ ಪ್ರಾಧಾನ್ಯ ದೊರೆಯುತ್ತಿತ್ತು. ಕ್ಷೇತ್ರೀಯ ಶಾಲಾಂತ ಪರೀಕ್ಷೆ (Vernacular Final Examination) ಯಲ್ಲಿ ಉತ್ತೀರ್ಣರಾದವರೆಲ್ಲ ಹೆಚ್ಚು-ಕಡಿಮೆ ಕಡ್ಡಾಯವಾಗಿಯೆ ಭರತಮುನಿಯಿಂದ ಜಗನ್ನಾಥ ಪಂಡಿತನ ವರೆಗೆ ವಿಕಸಿತವಾದ ಅಭಿಜಾತ್ಯ ವಾಙ್ಮಯಮೀಮಾಂಸೆಯಲ್ಲಿ ಪರಿಣತರಾದವರಿರುತ್ತಿದ್ದರು. ತಮ್ಮ ಮುಂದಿನ (ಮಾಧ್ಯಮಿಕ ಸ್ತರದ) ಅಭ್ಯಾಸದಲ್ಲಿ ಅಂಥವರು ಮೂರು. ನಾಲ್ಕು ವರ್ಷಗಳ ವರೆಗೆ ಆಂಗ್ಲಭಾಷೆಯನ್ನು (ಮುಖ್ಯವಾಗಿ ಶಿಕ್ಷಣಮಾಧ್ಯಮದ ರೂಪದಲ್ಲಿ) ಕರಗತ ಮಾಡಿಕೊಳ್ಳಬೇಕೆಂದು ವಿಧಿಸಲಾಗಿತ್ತು. ಮಾಧ್ಯಮಿಕ ಶಾಲಾಂತ ಪರೀಕ್ಷೆ (Matriculation) ಯ ಬಳಿಕ ಅವರು ಮಹಾವಿದ್ಯಾಲಯ, ವಿಶ್ವವಿದ್ಯಾಲಯವನ್ನು ಸೇರಿದಾಗ ತಂತಮ್ಮ ಮಾತೃಭಾಷಾಸಾಹಿತ್ಯದ ಉಚ್ಚಾಧ್ಯಯನವನ್ನು ಆಂಗ್ಲಭಾಷಾಮಾಧ್ಯಮದಿಂದಲೇ ಕೈಕೊಳ್ಳಬೇಕಾಗುವದು ಅಪರಿಹಾರ್ಯವಿತ್ತು. (ದ್ವಿತೀಯ ಮಹಾಯುದ್ಧದ ಕೊನೆಯ ಕಾಲದ ವರೆಗೂ ಅಂದಿನ ಮುಂಬಯಿ, ಮದ್ರಾಸಗಳಂಥ "ಪ್ರಾಂತ"ಗಳಲ್ಲಿಯೂ ಮೈಸೂರಿನಂಥ "ಸಂಸ್ಥಾನ"ಗಳಲ್ಲಿಯೂ ಮಹಾವಿದ್ಯಾಲಯಗಳ ಕನ್ನಡ ಪಾಠಗಳನ್ನು ಪ್ರಾಧ್ಯಾಪಕರು ಆಂಗ್ಲಭಾಷೆಯಲ್ಲಿಯೇ ಧಾರಾಳವಾಗಿ ನಡೆಯಿಸುತ್ತಲಿದ್ದ "ಸ್ವಾರಸ್ಯ"ಮಯ ಪರಿಸ್ಥಿತಿ ಸರ್ವವಿದಿತ!) ಈ ವಿಶಿಷ್ಟ, ವಿಪರೀತ, ವಿಚಿತ್ರ ಪರಿಸ್ಥಿತಿಯೇ ನಮ್ಮ ವಿಮರ್ಶಾತ್ಮಕ ವಿವೇಚನಾ ಸಂಕರಕ್ಕೆ ಮೂಲ ಕಾರಣ. ಏಕೆಂದರೆ ಪ್ರಾಚೀನ, ಮಧ್ಯಯುಗೀನ ಭಾರತೀಯ ಅಭಿಜಾತ್ಯ ಸಾಹಿತ್ಯಮೀಮಾಂಸೆಯನ್ನು ಆಂಗ್ಲಭಾಷಾಮಾಧ್ಯಮದಿಂದ ಅಧ್ಯಯನ, ಅಧ್ಯಾಪನ ಮಾಡುವಾಗ ವಿದ್ಯಾರ್ಥಿ, ಅಧ್ಯಾಪಕರು ಅಭಿಜಾತ್ಯವಿರೋಧಿಯಾದ ರಮ್ಯತಾನಿಷ್ಠ ವಾಖ್ಯೆ, ಪರಿಕಲ್ಪನೆಗಳನ್ನೇ ಬಳಸಬೇಕಾಗುತ್ತಿತ್ತು. ಅಭ್ಯಸಿಸಬೇಕಾಗಿದ್ದ (ಅಭಿಜಾತ್ಯ) ವಿಷಯ, ಅಭ್ಯಾಸಕ್ಕಾಗಿ ಪ್ರಯೋಗಿಸಲಾದ (ರಮ್ಯತಾವಾದಪರ) ಪರಿಕಲ್ಪನೆ ಇವುಗಳಲ್ಲಿಯ ಪರಸ್ಪರ ವಿರೋಧ ಪ್ರಕೃತಿಯಿಂದಾಗಿ

ಭಾರತೀಯ ವಿಮರ್ಶಾವಿವೇಚನೆಯೊಳಗೆ ಹೀಗೆ ಪರಿಕಲ್ಪನಾತ್ಮಕ ಗೊಂದಲ ಮಯತೆ ತಂತಾನೆ ನುಗ್ಗುವಂತಾಯ್ತು.

ಪ್ರಚಲಿತ ಪರಿಕಲ್ಪನೆಗಳ ಅಸ್ಪಷ್ಟತರ ಅವಸ್ಥೆ ಇಷ್ಟಕ್ಕೇನೇ ಮುಗಿಯಲಿಲ್ಲ. ಕ್ಷೇತ್ರೀಯ ಸಾಹಿತ್ಯಾಭ್ಯಾಸದ ಅಧ್ಯಯನ, ಅಧ್ಯಾಪನದ ಅನುಕೂಲಕ್ಕಾಗಿ ಉಪ ಯೋಗಿಸಲಾಗುತ್ತಿದ್ದ ಆಂಗ್ಲವಿಮರ್ಶಾನಿಷ್ಠ ತತ್ತ್ವ-ಸಿದ್ಧಾಂತ-ಪರಿಕಲ್ಪನೆಗಳೆಲ್ಲ ಹೆಚ್ಚೆಂದರೆ ಎ. ಸಿ. ಬ್ರಾಡ್ಲೀ ವರೆಗೆ ವಿಕಾಸಗೊಂಡು ಪ್ರಚಲನೆಯಲ್ಲಿ ಬಂದಿದ್ದ ವಿವೇಚನೆಯಿಂದ ಮಾತ್ರ ಆಯ್ದುಕೊಂಡಂಥವಾಗಿದ್ದವು. ಆದರೆ ಆಂಗ್ಲ, ಪಾಶ್ಚಾತ್ಯ ವಿಮರ್ಶಾತತ್ತ್ವಗಳು ಆ ಮುಂದೆಯೂ, ಇಂದಿನ ವರೆಗೂ, ಅವ್ಯಾಹತ ವಾಗಿ ವಿಕಾಸಗೊಳ್ಳುತ್ತ ಸಾಗಿವೆ; ಅಸಂಖ್ಯ ಸಿದ್ಧಾಂತಗಳು ಎಣೆಯಿಲ್ಲದಷ್ಟು ಪುನರ್ಮೌಲ್ಯಾಂಕನಕ್ಕೆ, ಪರಿಷ್ಕರಣಕ್ಕೆ, ಸ್ವೀಕಾರ ಧಿಕ್ಕಾರಕ್ಕೆ, ಪರಿವರ್ತನಕ್ಕೆ ಈಡಾ ಗುತ್ತ ಬಂದಿವೆ. ಈ ಎಲ್ಲ ಸ್ಥಿತ್ಯಂತರಗಳ ಪರಿಜ್ಞಾನ ಹಲಕೆಲವು ಮಾತ್ರ ಸಾಹಿತಿ, ವಿವೇಚಕರನ್ನುಳಿದು ರಸಿಕಸಾಮಾನ್ಯರ ಕೈಯ್ಯಳವಿಗಾಗಲೀ ಅದಕ್ಕೂ ಹೆಚ್ಚು ಮಹತ್ವದವರಾದ) ನಮ್ಮ ಸಾಹಿತ್ಯದ ಶಾಸ್ತ್ರೀಯ ಅಧ್ಯಯನ, ಅಧ್ಯಾಪನದಲ್ಲಿ ನಿರತರಾದ ಅಭಿಜ್ಞರ ವ್ಯಾಸಂಗದಲ್ಲಾಗಲೀ ಬರುವಂತೆ ಯಾವ ಸುಸಂಬದ್ಧ ಪ್ರಯತ್ನವೂ ಆಗಿಲ್ಲ. ನಮ್ಮ ಈ ಅಪರಿವರ್ತಿತ ವಿದ್ಯಾಪದ್ಧತಿಯಿಂದಾಗಿ, ಸ್ವಾತಂತ್ರ್ಯೋತ್ತರ ಭಾರತೀಯ ಪದವೀಧರ, ವಿದ್ಯಾರ್ಥಿ, ಅಧ್ಯಾಪಕರು ಇವರು ಗಳಿಗೆಲ್ಲ ಹೆಚ್ಚೆಂದರೆ ಕಳೆದ ಶತಮಾನದ ಕೊನೆಯುವರೆಗಿನ ಆಂಗ್ಲ, ಪಾಶ್ಚಾತ್ಯ ಮೀಮಾಂಸೆ ಪರಿಚಿತವಾಗುತ್ತ ಬಂದಿದೆ ಆ ನಂತರಿನ ಪ್ರಗತಿ-ಕ್ರಾಂತಿ-ಪರಿ ವರ್ತನೆ-ಮಾರ್ಪಾಟಗಳ ಬಗೆಗೆ ಸಮಾಧಾನಕರವಾದ ಪ್ರಮಾಣದಲ್ಲಿ ಅವರಿಗೆ ಪ್ರಶಿಕ್ಷಣ ದೊರೆಯುತ್ತಲಿಲ್ಲ.

ಈ ಎಲ್ಲ ಕಾರಣಗಳಿಂದಾಗಿ ನಮ್ಮ ವಿಮರ್ಶಾಪ್ರಣಾಲಿಯಲ್ಲಿ ಬಂದು ಸೇರಿರುವ ಪರಿಕಲ್ಪನಾತ್ಮಕ ಅಸ್ಪಷ್ಟತೆ ಬೇಗ ಇಲ್ಲದಾಗಬೇಕು ಅದನ್ನು ನಿರ್ಮೂಲ ಗೊಳಿಸಲು ತೀವ್ರ ಆಂದೋಲನ ನಡೆಯಬೇಕು. ಸದ್ಯದ ವೈಚಾರಿಕ ಸಂಕರಕ್ಕೆ ಕಾರಣವಾಗಿರುವ ಪರಿಕಲ್ಪನಾತ್ಮಕ ಅಜ್ಞಾನ, ಅಶಾಸ್ತ್ರೀಯಜ್ಞಾನವನ್ನು ಉದ್ದೇಶ ಪೂರ್ಣ ಸಾಮರ್ಥ್ಯದಿಂದ, ನಿತಾಂತ ಸಹನೆಯಿಂದ ದೂರಮಾಡಬೇಕು. ಈಗಾಗಿ ರುವ ನಷ್ಟವನ್ನು ತುಂಬಿಕೊಳ್ಳಲು ನಮ್ಮ ಸದ್ಯದ (ಪ್ರಗಲ್ಭ) ಸಾಹಿತ್ಯಸಂದರ್ಭಕ್ಕೆ ತುಂಬ ಅವಶ್ಯವಾದ, ಪ್ರಸ್ತುತ (relevant) ವಾದ, ಪಾಶ್ಚಾತ್ಯ ಸಾಹಿತ್ಯ ಮೀಮಾಂಸೆಯ ಆಧುನಿಕ ಹಾಗು ಸಮಕಾಲೀನ ವಿಕಾಸಕ್ರಮದ ಸಮಂಜಸ ಪರಿ ಚಯವನ್ನು ಅಸ್ಪಷ್ಟತಾವಿದೂರ ಕ್ರಮದಲ್ಲಿ, ಅವಶ್ಯವಿರುವಷ್ಟು ಪ್ರಮಾಣದಲ್ಲಿ ಮತ್ತೊಮ್ಮೆ ನಮ್ಮ ಸಾಹಿತ್ಯಿಕ ಸಮಾಜದವರೆಲ್ಲರಿಗೆ ಮಾಡಿಕೊಡಬೇಕು.

(ಮುಂದುವರಿಯುವುದು)

ಬಸವರಾಜ ನಕ್ಕುಂದ

## ಹತ್ತು ಕವನಗಳು

### ೧. ಲೆನಿನ್ - ಗಾಂಧಿ

ಕತ್ತಲೆಯ ಉದರಕ್ಕೆ
ಬರ್ಚಿಯ ಚುಚ್ಚಿ
ಮೂಡಣದ ದ್ವಾರಗಳ
ಬೇಡಿಗಳ ಬಿಚ್ಚಿ
ಬೆಂಕಿ ಮೈ ಜಳದಿಂದ
ಚಿಕ್ಕಿಗಳ ಸುಟ್ಟು
ಮೋಡಗಳ ರಕ್ತದಲಿ
ಮೈತೊಳೆದುಕೊಂಡು
ಭೂಮಿ ಬತ್ತಲೆ ನೃತ್ಯ
ರವಿ ಕಂಡು ನಕ್ಕಾಗ
ಲೆನಿನ್ ನೆನಪಾಗುತ್ತಾನೆ.

ಬಾಂಬುಗಳ ಹೆಣ ಸುಟ್ಟ
ಸ್ತಬ್ಧ ನೀರವ ರಾತ್ರಿ
ತುಂಬು ಬೆಳದಿಂಗಳ
ತುಟಿಗೆ ಲೇಪಿಸಿಕೊಂಡು
ತಾರೆಗಳ ತೋಟದಲಿ
ತಂಪು ಛಾಪಿಸಿಕೊಂಡು
ಹೂವ ಹೆಜ್ಜೆಯನಿಟ್ಟು
ಚಂದ್ರ ಚಲಿಸುತ್ತಿರಲು
ಪ್ರೇಮಿಗಳ ತೋಳುಗಳು
ಭೂಮಿಯನು ಬಿಗಿದಾಗ
ಗಾಂಧಿ ನೆನಪಾಗುತ್ತಾನೆ.

# ೨. ಸಂಭವಯಾಮಿ ಉಘೇ ಉಘೇ

ನಿನ್ನ ಮಾದಕ ನಗೆ
ನನ್ನ ಕಣ್ಣು ಕಟ್ಟಿದಾಗ
ನಾನು ಕುರುಡನಾಗುವದಿಲ್ಲ
ಮೈತುಂಬ ಕಣ್ಣುಗಳ ದೀಪಾ ಹಚ್ಚಿ
ನಿನ್ನ ಪುಟ ಪುಟವನ್ನು
ಬಿಡಿ ಬಿಡಿಸಿ ಓದುತ್ತೇನೆ.

ನಿನ್ನ ಕಣ್ಣ ಕಿರಣಗಳ
ಶೀತಲ ಬೆಂಕಿಯಲ್ಲಿ
ನಾ ಬೆಂದು ಬೂದಿಯಾಗುವದಿಲ್ಲ
ಚಳಿ ಬಿಡಿಸುವ
ನಿಗಿನಿಗಿ ಕೆಂಡವಾಗುತ್ತೇನೆ.

ನಿನ್ನ ಸ್ನಿಗ್ಧ ಕೆನ್ನೆಗಳ
ಇಳಿಜಾರಿನಲ್ಲಿ ಜಾರಿ
ಉಲ್ಕೆಯಾಗಿ ನಾ ಉದುರುವದಿಲ್ಲ
ಸುರೇಪಾನದ ಹಾಗೆ ನಿನ್ನ
ಸೆಳೆವ ಸೂರ್ಯನಾಗುತ್ತೇನೆ.

ನಿನ್ನ ಮೈಕಟ್ಟುಗಳ ಮಹಾಪೂರದಲ್ಲಿ
ನಾ ತೇಲಿ ಹೋಗುವಾಗ
ನನ್ನ ಉಸಿರು ಕಟ್ಟುವದಿಲ್ಲ
ಮೈತುಂಬ ಉಸಿರುಗಳ
ಮಹಾಪೂರ ಉಕ್ಕುತ್ತದೆ.

ಆದ್ದರಿಂದ ಚೆಲುವೆ
ನನ್ನ ಕಣ್ಣಿನ ಕಕ್ಷೆಯಲ್ಲಿ
ನೀ ಪರಿಭ್ರಮಿಸುವಾಗ
ಹಗಲು ರಾತ್ರಿಗಳೇನಾಗುವದಿಲ್ಲ ಬಿಡು.
ಬದಲಾಗಿ ನಿನ್ನ ಹಾಗಿರುವ
ಒಂದು ಸುಂದರ ಕವನಕ್ಕೆ
ಮೋಡಗಳು ಮೂಡಿ ಮಳೆಗರೆಯುತ್ತವೆ.

●

## ೩. ಕನಸು ಕರಗಿ, ಕವನ

ನನ್ನ ಬಳಿ
ಮುನ್ನ ಇರಲಿಲ್ಲ ಈ ಕುದುರಿ,
ಕಣ್ಣ ಬಳಿ ಗಿರ್ರನೆ ತಿರುಗಿದ ತಿಗುರಿ
ಯಲ್ಲಿ ಹಠಾತ್ತನೆ ಮೈದಳೆಯಿತು
ಬೆಳ್ಳಿ ಬಂಗಾರದಂಗ ಹೊಳೆದು
ರಕ್ತ ಮಾಂಸ ತುಂಬಿ ಜೀವಂತ ಮೈ ತುಳುಕಿಸಿತು.
ತೊಯ್ದು ಮೈ ಕೊಡವಿ ಝಾಡಿಸಿ
ರೇಡಿಯುಮ್ಮಿನ ಕಣ್ಣ ಮಿಳುಕಿಸಿತು.
ಬಿಸಿಲುಗುದುರೆಯು ಹುಸಿತನದ ಸೆಂಗು
ಯಾವ ಅಂಚಿನಲ್ಲಿಯೂ ಮಿಂಚಲಿಲ್ಲ.
ಗಟ್ಟಿ ನೆಲದ ಮೇಲೆಯೇ ನಾನು ಕಾಲೂರಿದ್ದು
ಗಾಳಿಗುದುರಿಯೆಂಬ ಗುಮಾನಿ ಮೂಡಲಿಲ್ಲ.
ತಿರುಕ ಕಂಡ ಕನಸೆನ್ನಲೇ ?
ಇಲ್ಲ, ಖಂಡಿತ ನಾನು ಮಲಗಿರಲಿಲ್ಲ.
ಹೆಜ್ಜೆ ಹಾಕುತ್ತ ಬಂತು.... ಬಂತು....
ಸಮೀಪ ಬಂತು.... ಎಂಬ ಭಾವನೆ ಒತ್ತರಿಸಿದಾಗ
ಮೆದುಳ ಬಳ್ಳಿ ಕತ್ತರಿಸಿ,
"ಬಂದೇ ಬಿಟ್ಟಿದ" ಎಂದು ಭ್ರಮಿಸಿದ್ದು ತಪ್ಪು
ಕಣ್ಣಪಟ್ಟಿ ಕಿತ್ತು, ಬತ್ತಲೆಗುದುರಿಯ
ತದಿ ಲಗಾಮಿಲ್ಲದೆ ಹತ್ತಿ ಹಾರಿದ್ದು ತಪ್ಪು
ಕೂತವ ಕೂತಲ್ಲಿಯೇ ಕೂತು
ಕುದುರಿ ಮಾತ್ರ ಬಯಲಲ್ಲಿ ಬಯಲಾದಾಗ
ನಾನು ಕುದುರಿಯ ಮೇಲೆ ಕೂತಿರಲಿಲ್ಲ ಅನ್ನಿಸಿ
ಕ್ಷಣ ಶೂನ್ಯವಾಯಿತು, ಮನ.
ಆ ಶೂನ್ಯದ ಕಿಂಡಿಯಲ್ಲಿ
ಸಮೀಪದ ಮಧ್ಯವಿರುವ ಕಂದಕ ಕಂಗೊಳಿಸಿತು
ತಿರುಗುತ್ತಿರುವ ತಿಗರಿಯ ಮೇಲೆ
ಶಬ್ದಗಳು ಚಡಪಡಿಸಿ
ಖಾಲಿಯಾದ ಕುದುರಿಯ ಜಾಗೆಯಲ್ಲಿ
ಕವನವೊಂದು ಮೂಡಿತು.

●

# ೪. ಇವರ ಬಿಟ್ಟು ಇವರ್‍ಯಾರು ?

ಶಬ್ದಗಳೇ ಹೀಗೇಕೆ ನೀವು
ವಿನಾಕಾರಣ ಒರಟಾಗುತ್ತೀರಿ ?
ನ್ಯೂಟ್ರಾನನ್ನು ನಿಂದಿಸುವ ನಂದಿಸುವ
ನೀವೇ ನ್ಯೂಟ್ರಾನ್ ಆಗಬಹುದೇ ?
ಆಗ ನೀವು ಬದುಕುವದಿಲ್ಲ.
ಹೌದು, ನಿಮ್ಮ ಬದುಕನ್ನು ಅಪಹರಿಸಿದ
ಕಳ್ಳರನ್ನು ನೀವು ಕೊಲ್ಲಬೇಕಾಗಿದೆ
ನೀವು ಮಾಡಿಟ್ಟ ಅಡಿಗೆಯನ್ನುಂಡು
ಹೊಮ್ಮಿಸಿದ ಸೆಲೆಗಳನ್ನವರು ಕುಡಿದಿದ್ದಾರೆ.
ಹಸಿರು ವೃಕ್ಷಗಳನ್ನು ಬರಡಾಗಿಸಿ
ಟೊಂಗೆಗಳಲ್ಲಿ ಜೀಕಾಡಿದ್ದಾರೆ ....
ಆದರೆ ನೀವು ಖಡ್ಗದ ಹಾಗೆ ಚೂಪಾಗಿ ಕಂಡರೆ
ನಿಮ್ಮ ಶಿವಿತಗಳು ನಾಟದ ಹಾಗೆ
ಅವರು ಕವಚ ಧರಿಸುತ್ತಾರೆ.
ನೀವು ಪಂಜಾಗಿ ಧುಮುಧುಮಿಸಿದರೆ
ಅದರಲ್ಲಿ ಯಾರೂ ಹುರುಪುಳಿಸಿ ಕರಕಾಗುವದಿಲ್ಲ.
ಬದಲಾಗಿ ಉರಿರಕ್ಷಿತ ಭದ್ರ ಕೋಟೆಗಳ ಕಟ್ಟಿಕೊಳ್ಳುತ್ತಾರೆ.
ನೀವು ಕೋಟೆಗಳನ್ನೇ ಮುತ್ತುವೆವೆಂದು ಕೂಗಾಡಿದರೆ
ನಿಮ್ಮ ಗುಂಪಿನಲ್ಲಿ ದನಿಗೂಡಿಸುವವರ ಯಾರಂದಿರಿ ?
ಕಿವಿಯ ರಂಧ್ರಗಳಲ್ಲಿ ಅರಳೆ ತುಂಬಿಕೊಂಡು
ನಿಮ್ಮ ಗಂಟಲುಗಳಿಗೆ ಶಸ್ತ್ರಕ್ರಿಯೆ ನಡೆಸುವವರು ಯಾರಂದಿರಿ?
ನಿಮ್ಮ ಸುತ್ತ ಆಗ ಸಾವು ಪಹರೆ ನಡೆಸುತ್ತದೆ.
ಕ್ಲೋರೋಫಾರ್ಮಿನಲ್ಲಿ ನಿಮ್ಮ ದನಿ ಕರಗಿಹೋಗುತ್ತದೆ.
ಅರ್ಥವಾಗದ 'ಲೆಫ್ಟ್-ರೈಟು' ಸದ್ದಿನಲ್ಲಿ
ಅನರ್ಥವಾಗಿ ಸತ್ತು, ಸಿದ್ಧಾಂತಗಳ ಸಿದ್ದಿಗೆಯೇರಿ ಸಾಗುತ್ತೀರಿ.
ನಿಜ. ನೀವು ಸಾವಿಗೆ ಹೆದರುವ ಹೇಡಿಗಳಲ್ಲ
ಆದರೆ ಕೊಲ್ಲಬೇಕಾದವರು ಸತ್ತುಹೋದರೆ ಯಾರು ಬದುಕುತ್ತಾರೆ?
ನದಿಸೇರಿ ಉಕ್ಕೇರಿ ನೀವು ಸಾಗರದ ಕಡೆ ಸಾಗುವಾಗ
ಹಸಿರು ನಿಶಾನಿ ಹಿಡಿಯುವವರು ಯಾರಂದಿರಿ ?
ನೆಲದ ಒಡಲಿನಲ್ಲಿ ಗುಪ್ತಗಾಮಿನಿಯಾಗಿ ಹರಿದು

ಭೂಮಿಯ ಮೇಲೆ ಕಾರಂಜಿಯಾಗಿ ಚಿಮ್ಮುವವರು ಯಾರೆಂದಿರಿ ?
ಅವರೇ, ಗಟಾರದಲ್ಲಾದರೂ ಸರಿ ನಿರಂತರ ಹರಿಯುವವರು !
'ಹುಚ್ಚುಹೊಳೆಯಾಗಿ ಹರಿದು ಕೊಚ್ಚಿಕೊಂಡು ಹೊರಟಿದ್ದೇವೆ'
ಎಂದು ನೀವು ಭ್ರಮಿಸುವಾಗೆಲ್ಲ ಜಿಗುಟಾಗಿ ನಿಮ್ಮನಪ್ಪಿಕೊಂಡವರು.
ನೀವೀಗ ಹೊರಟಿದ್ದು ಪ್ರವಾಹದಲ್ಲಲ್ಲ. ಸುಳಿಯಲ್ಲಿ.
'ಬಿಟ್ಟೇ ಬಿಟ್ಟೇ ಬೆಳಗಾತು ತಟ್ಟೇ ಮನಿ ಹಾಳಾತು ....
ಶಬ್ದಗಳೇ .... ಶಬ್ದಗಳೇ .... ದಿಟ್ಟಿಸಿ ನೋಡುತ್ತೀರಾ ?
ಇವರ ಬಿಟ್ಟು ಇವರ್ಯಾರು ?'



## ೫. ಹವಾಮಾನ

ಮಾನ ಹವಾಸೇರಿ ಹವಮಾನ ಕೆಟ್ಟಿದೆ
ಜಂಗು ಹಿಡಿದಿವೆ ಈಗ ಶ್ವಾಸ-ಕೋಶ
ದುರ್ಗಂಧಗಳಲೀಜಿ ಮೂಗು ಮರಗಟ್ಟಿವೆ
ತುದಿಯಲ್ಲಿ ತುಂಬಿವೆ ಗುಡುಗು ಮಿಂಚು

ಉದಯರಾಗದ ಹಕ್ಕಿ ಕಳಚಿಕೊಂಡಿವೆ ರೆಕ್ಕೆ
ಕೋಗಿಲೆಯ ಕೊರಳಲ್ಲಿ ರಕ್ತಧಾರೆ
ಎಲೆಗಳ ಆಸರೆಗೆ ವೈಮಾನಿಕ ದುಡಿ ಹಾರಿದರೆ
ಸಾವಿನ ಹೂಗಳನೆ ಗಿಡ ತೊಡಬೇಕೆ ?

ರಕ್ತನಾಳಗಳಲ್ಲಿ ಚಂಡಮಾರುತ ನುಗ್ಗಿ
ಕಂಡಕಡೆ ಗುಂಡಿಗೆ ಬಲಿಯಾಗಿವೆ
ಆಕಾಶಕಡರಿದ ಆತ್ಮಗಳು ಜಳ ತಾಗಿ
ನೆಲದುಪ್ಪು ಖಾರವನು ನೆಕ್ಕುತ್ತಿವೆ.

ಕೊಳವೆ ಕೊಳವೆಗಳಲ್ಲಿ ಸುಳಿದು ಹೊಗೆನಟ್ಟಿದೆ
ಇಂಗಾಲದಾಕ್ಸೈಡು ಹೆಡೆಯೆತ್ತಿದೆ
ಹಸಿರಿನ ಕೊರಳಿಗೆ ಕಚ್ಚಿಬಿಟ್ಟಿವೆ ಹಾವು
ಉಸುಲು ಸಿಕ್ಕಿರಬೇಕು ತಂಗಾಳಿಗೆ !

ಕಣ್ಣೀರ ಮಳೆ ಸುರಿದು ಹೊಳೆಹಳ್ಳ ತುಂಬಿವೆ
ಪೂರಬರಬಹುದೆಚ್ಚರ ತೀರದವರೇ
ತೊಯ್ದು ಭೂಮಿಯಲೀಗ ಮಣ್ಣವಾಸನೆವುಡುಗಿ
ಜನರ ಅಳಲಿನ ಕಳಲು ಹೊಡೆಹರಿದಿವೆ.

ಚಾಂಡಾಲ ಚೌಡಿಗಳ ಗಂಡುಗರ್ಭವ ಸೇರಿ
ಆದಿಭೂತಗಳಲ್ಲಿ ಅವಿತುಕೊಂಡರು ಸರಿಯೆ
ಸೀಳುವದ ಸೀಳಿ ಬಗೆಯುವದ ಬಗೆದು
ಆಮ್ಲಜನಕವ ಹುಡುಕಿ ತೆಗೆಯಬೇಕು

●

## ೬. ಬತ್ತಿ ಹೊತ್ತಿಸುವವರು

ನಾ ಬರೆವ ಹಾಡುಗಳ
ತಳ
ಮಳಗಳಲ್ಲಿ
ನಾ ಕದ್ದ ನಿಮ್ಮ ಗಂಟಲುಗಳಿವೆ
ನಾ ಕದ್ದ ನಿಮ್ಮ ಗಂಟಲುಗಳಲ್ಲಿ
ನಿಮ್ಮ ಕನಸುಗಳ
ಪುಡಿಯಾದ ಪಳೆಯುಳಿಕೆಗಳು
ಅನಂತ ಕಥಾಸಾಗರವನ್ನೇ ಹೊತ್ತು ನಿಂತಿವೆ.
ಆ ತಪ್ತ ಸಾಗರದಾಳದಿಂದ
ಉಗಿಯಾದ ಉಸಿರು
ಆಕಾರವಿಲ್ಲದ ಆಕಾಶದಲ್ಲಿ
ಮೋಡವಾಗಿ ಸಾಕಾರಗೊಂಡು
ನಿಮ್ಮ ದನಿಗಳೆಲ್ಲ ಬತ್ತಿ ಹೋಗಿವೆ.
ಆಶ್ಚರ್ಯವೆಂದರೆ
ಬತ್ತಿ ಹೋದ ನಿಮ್ಮ ದನಿಗಳಿಂದಲೇ
ನನ್ನ ಹಾಡಿನ ಬತ್ತಿ ಹೊತ್ತಿವೆ.

●

ಸೃಜನವೇದಿ : ೧೫, ಎಪ್ರಿಲ್ ೧೯೮೪ | ೪೩

## ೭. ಸಮಾಧಾನ

ಸಂಜೆ ಮಾಳಿಗೆ ಮೇಲೆ
ಗಾಳಿಯನುಕಂಪದಲಿ
ನನ್ನೀ ಕನಸುಗಳ
ಹಾರಿ ಬಿಡುವೆನು — ಹಕ್ಕಿಗಳ ಜತೆಗೆ
ರೆಕ್ಕೆ ಮೂಡುವವಾಗ ನನ್ನ ಕತೆಗೆ
ಬೆಟ್ಟ ತಿಟ್ಟುಗಳ ಹತ್ತಿ
ಸಪ್ತಸಾಗರ ಮುತ್ತಿ
ಬಾನುಭುವಿಗಳ ಸುತ್ತಿ
ವಲಸೆ ಹೋದರು ಕೂಡ
ಈ ಕನಸುಗಳು ಹಾಡಾಗಿ
ನನ್ನೆದೆಯ ಗೂಡಿನಲ್ಲಿಯೇ ನೆಲೆಸಿವೆ.

●

## ೮. ಆಲಾಪ

ಬಳ್ಳಿಯಂತ ನಾ ಭಾವಿಸಿದ್ದೆ
ಅದು ಕುಡೀಯೊಡಿಯಲಿಲ್ಲ
ಬೆಳೀಯಂತ ನಾ ಭಾವಿಸಿದ್ದೆ
ಅದು ಹೊಡೀ ಹಿರಿಯಲಿಲ್ಲ

ಕಣ್ಣಿನ ಕಣದಲಿ ಒಕ್ಕಿದ ಕನಸು
ಕಣಜದಲ್ಲೆ ಕರಗಿ
ಇಲಿ ಹೆಗ್ಗಣ ತೋಡಿದ ಗುದ್ದಲಿ
ಕಾಣಲಿಲ್ಲ ದಾರಿ

ಕಟ್ಟಿದ ಕಥಿ ಬಿಚ್ಚಿದ ಕವನ
ಮಣ್ಣಿನಲ್ಲೆ ಹೂತು
ಹುಟ್ಟಲೆಯಿಲ್ಲ ಬಿತ್ತಿದ ಬೀಜ
ಹೋಯಿತೇನೊ ಕೊಳೆತು

ಹೊತ್ತ ಭಾರದಿ ಹೊರಡದಾಗಿದೆ
ಹೂವಿನಂಥ ಮಾತು
ಗಿಡಾಕಿ ಇಲ್ಲದೆ ಹಣ್ಣಗೊಂಚಲು
ಬೀಳಬಹುದೆ ಜೋತು

●

## ೯. ಪ್ರೀತಿ ?

ಪ್ರಿಯೆ,
ಬಾಹುಗಳನ್ನು ನೀನು
ಬಂಧನಗಳೆಂದು ಭಾವಿಸುವದಾದರೆ
ನಿನಗೆ ನಾನು
ನನಗೆ ನೀನು
ಜೇಲಾಗಿ ಬಿಡುತ್ತೇವೆ.
ಆಗ ಪ್ರೀತಿಯ ಅರ್ಥ:
ತೋಳುಗಳ ಸಂಕೋಲೆ ತೊಟ್ಟ
ಕಾರಾಗ್ರಹವಾಸ.

●

## ೧೦. ಬಿನ್ನವತ್ತಳೆ

ಮಾತಿನ ಕೊರಳಿಗೆ ಗಲ್ಲಾದ ಗಂಟಲಲಿ
ನೋವಿನ ಬೀಜಕ್ಕೆ ಮೌನವು ಚಿಗಿತಿರಲು
ಸೊಲ್ಲುಗಳ ಮಲ್ಲಿಗೆಯ ಅತ್ತರು ಸಿಂಪಡಿಸಿ
ಕಲ್ಲಾದ ಕನಸುಗಳ ಹೂವಾಗಿ ಅರಳಿಸು.

ಕತ್ತಲೆಯು ಮಬ್ಬಿನಲಿ ಕರಗಿ ಹೋದವರನ್ನು
ಚಿಕ್ಕ ಚಿಮಣಿಯು ಕುಂಚ ಚಿತ್ರ ಬಿಡಿಸುವ ಹಾಗೆ

ಸೃಜನವೇದಿ ; ೧೫. ಏಪ್ರಿಲ್ ೧೯೮೪ , ೪೫

ಬತ್ತಿರುವ ಭೂಮಿಯಲಿ ಸತ್ತಿರುವ ಆಶೆಗಳು
ಹೊಡೆ ಹಿರಿವ ಹಾಗೊಂದು ಝರಿಯು ಹರಿಸು.

ಕರಳು ಬಳ್ಳಿಗಳೊಳಗೆ ಚಿಗರು ಹರಿದಾಡಲಿ
ಪಕಪಕ ರೂಪಕ ಪರಿಮಳಿಸು
ಅಸ್ತಿನಕ್ಷೆಯುವೊಳಗ ರಕ್ತಮಾಂಸ ತುಂಬು
ಲಿಕಿಲಿಕಿ ಹೋಲಿಕಿ ಹೊಡಮರಳಿಸು.

ಉತ್ಪ್ರೇಕ್ಷೆಗಳ ಸಮನಾಗಿ ಕತ್ತರಿಸು
ಹಂಚು ಹಸಿದವರಿಗೆ; ದೃಷ್ಟಾಂತಿಸು
ಸಿಡಿಲು ಗುಡುಗು ಮಿಂಚು ವಂಚಿಸಬಹುದು
ನೆಲದ ನೇಗಿಲದಲ್ಲೆ ಸೆಲೆಯೊಡಿಸು

ಹತ್ತು ದಾರಿಗಳಲ್ಲಿ ಶಬ್ದ ಹರಿದಾಡಿದರು
ಕೂಟಕೂಟಗಳಲ್ಲಿ ಸಂಧಿಗೊಳಿಸು
ನವಮಾಸ ನೆನೆದರು ರಾಡಿ ಮುಸುಕಿದ ಹಾಡು
ನೆಲದೊಡಲ ತೊಳೆ ತೊಳೆ ಶುಭ್ರಗೊಳಿಸು.



ಡಾ. ಹೇಮಂತ ಕುಲಕರ್ಣಿ

---

# ನವ್ಯತೆಯ ಹಿನ್ನೆಲೆ
## (ಭಾಗ – ೧)

### I. ಮೊದಲ ಮಾತು

ಅನೇಕ ಸೆಲೆಗಳಿಂದ ಉತ್ಸ್ಫೂರ್ತವಾದ, ಬೇರೆ ಬೇರೆ ದೇಶಗಳ ನೆಲದ ರುಚಿಯುಂಡು ಪುಷ್ಟವಾದ ಅನೇಕ ಭಾಷೆಗಳ ಸತ್ವವನ್ನು ಹೀರಿ ಉದ್ದಾಮವಾದ, ವಿಶ್ವಸಂಸ್ಕೃತಿಯಲ್ಲಿಯೇ ಅಧಿಷ್ಠಿತವಾಗಿ ಸರ್ವವ್ಯಾಪ್ತಿಯಾದ, ನವ್ಯತೆ (Moder nism) ಯೆಂಬ ಹೆಸರಿನಿಂದ ಪರಿಚಿತವಾದ ಈ ಕಲಾಪ್ರಕಾರಕ್ಕೆ ನೂರು ವರ್ಷಕ್ಕೂ ಹೆಚ್ಚು ವಯಸ್ಸಾಗಿದೆ.

ಪ್ರಯೋಗಶೀಲವಾಗಿರುವುದರಿಂದ ನವೀನತೆಯೇ ನವ್ಯದ ಜೀವಾಳವೆಂದು ಒಪ್ಪಿಕೊಂಡರೂ, ಇದರ ರೂಪ, ವೃತ್ತಿ, ಪ್ರಕೃತಿ, ತಂತ್ರ, ಶೈಲಿಗಳಲ್ಲಿ ಕಂಡು ಬರುವ ಸಾಮ್ಯತೆಯನ್ನು ಗುರುತಿಸಬಹುದಾಗಿದೆ. ಅಂದರೆ ನವ್ಯತೆಯು ಒಂದು ಪರಂಪರೆಯಾಗಿ ಬೆಳೆದಿದೆಯೆಂಬ ತೀರ್ಮಾನವನ್ನು ಮಾಡಬಹುದಾಗಿದೆ. ಇದರಲ್ಲಿ ಅಡಗಿರುವ ಇಂಥ ವಿರೋಧಾಭಾಸವೇ ನವ್ಯದ ನಿಜವಾದ ಸ್ವರೂಪವೇನೋ ಎಂಬ ಅನುಮಾನ ಮಾಡಬೇಕಾಗಬಹುದು. ಸಮೀಪದ ನಿನ್ನೆ ಮೊನ್ನೆಗಳ ಗತಕಾಲವನ್ನು (immediate past) ಪ್ರತಿಭಟಿಸಿ, ಅದರಲ್ಲಿ ಅಡಕವಾದ ಐತಿಹಾಸಿಕ ಸಂಬಂಧ ವನ್ನು ಕತ್ತರಿಸಿ ತಮ್ಮ ಕ್ರಾಂತಿಯ ಪತಾಕೆಯನ್ನು ಎತ್ತಿ ಹಿಡಿದ ನವ್ಯರು ಅತಿ ಪ್ರಾಚೀನ ಕಾಲದ ಪುರಾಣಗಳನ್ನೂ, ಆದಿವಾಸಿಗಳ ಸಂಸ್ಕೃತಿಯನ್ನೂ (Primiti- vism) ಅತ್ಯಾದರ ಪೂರ್ವಕವಾಗಿ ತಮ್ಮ ಕಲೆಯ ಅಂಗವನ್ನಾಗಿ ಬಳಸಿಕೊಂಡಿದ್ದಾರೆ. ವಿಜ್ಞಾನಯುಗದ ಯಾಂತ್ರಿಕ ಪರಿಸರದಲ್ಲಿ ಜನ್ಮವೆತ್ತಿದ ನವ್ಯತೆ ಯಾಂತ್ರಿಕತೆಯನ್ನು ವಿರೋಧಿಸುತ್ತಲೇ ಬಂದಿದೆ. ರಮ್ಯವಾದವನ್ನು ನಿರಾಕರಿಸಿದರೂ ರಮ್ಯವಾದದ ಕೆಲವು ಉತ್ತಮಾಂಶಗಳು ನವ್ಯತೆಯಲ್ಲಿ ತೋರುತ್ತಲೇ ಇವೆ. ಸೌಂದರ್ಯವೇ ಕಲೆಯ ಗುರಿಯೆಂದು ಬಹಳ ಕಾಲದಿಂದ ಬಂದಿರುವ ವಿಚಾರ ಸರಣಿಯನ್ನು ತೊಡೆದುಹಾಕಿ, ಎಷ್ಟು ಭಯಂಕರವಾಗಿದ್ದರೂ ಸತ್ಯವೇ ಕಾವ್ಯದ ಉದ್ದೇಶವೆಂದು ನವ್ಯತೆ ಪ್ರತಿಪಾದಿಸುತ್ತದೆ. ಅಶಿವವೂ, ಅಸುಂದರವೂ ಆದ ಅದ್ಯತನ ಜೀವನವನ್ನು ಯಥಾರ್ಥವಾಗಿ ವರ್ಣಿಸಬೇಕೆಂಬ ಹಟ ಇದಕ್ಕಿದೆ. ಅದರೆ

ಪುರಾಣ ಸಾಹಿತ್ಯದ ಆದ್ಯಪ್ರೇರಣೆಯೂ ಸತ್ಯದ ಅನುಷ್ಠಾನವೇ ಆಗಿತ್ತೆಂಬುದನ್ನು ನಾವು ಮರೆಯುವಹಾಗಿಲ್ಲ. ಈ ವಿರೋಧಗಳ ಎಳೆದಾಟವೇ ಇಲ್ಲಿ ಪ್ರಾಮುಖ್ಯವಾಗಿ ಕಂಡುಬರುತ್ತಿದ್ದರೂ ಇವುಗಳ ನಡುವೆ ಒಂದು ಸಮನ್ವಯವನ್ನು ಸಾಧಿಸಬೇಕೆಂಬ ಪ್ರಯತ್ನ ನಡೆದಿದೆಯೆಂಬುದನ್ನು ತಿಳಿದುಕೊಂಡರೆ, ನವ್ಯತೆಯ ಪರಂಪರೆ ಯಾವ ದಿಕ್ಕಿನಲ್ಲಿ ನಡೆದಿದೆಯೆಂಬುದು ಸ್ಪಷ್ಟವಾಗಬಹುದು.

ಪ್ರಥಮತಃ ನವ್ಯದ ವ್ಯಾಖ್ಯೆಯನ್ನು ಮಾಡಲು ತೊಡಗದೆ, ಅದರ ಅಂತಃಸ್ವರೂಪವನ್ನು ಕವಿಯ ಕಾವ್ಯದಲ್ಲಿ ಹುಡುಕಿ ತೆಗೆಯುವದೇ ಹೆಚ್ಚು ಸೂಕ್ತವಾದೀತು.

ಕನ್ನಡದಲ್ಲಿ ನವ್ಯತೆಯ ಬಗ್ಗೆ ಚರ್ಚೆಯಾಗಿದೆ. ಆದರೂ ಕೆಲವು ಮಾತುಗಳನ್ನು ಎತ್ತಿ, ಕೆಲವು ವಿಚಾರಗಳನ್ನು ಒತ್ತಿ ಹೇಳಿ ವಿಶದೀಕರಿಸಿದರೆ ನವ್ಯತೆಯ ಬಗ್ಗೆ ಒಂದು ಹೊಸ ದರ್ಶನವಾಗಬಹುದೇನೋ ಎಂಬ ಭಾವನೆಯಿಂದ ಈ ಲೇಖವನ್ನು ಬರೆಯಲಾಗಿದೆ.

ನವ್ಯತೆಯ ಆದ್ಯಪ್ರವರ್ತಕರಲ್ಲಿ ಪ್ರಮುಖರೆಂದೆಣಿಸಿದ ಟಿ. ಎಸ್. ಎಲಿಯಟ್‌ನ ಹೆಸರು ಮೇಲಿಂದ ಮೇಲೆ ಉಚ್ಚರಿಸಲಾಗುತ್ತದೆ. ಅವನ ಹಾಗು ಮತ್ತಿತರ ನವ್ಯ ಕವಿಗಳ ಮೇಲೆ ಪ್ರಭಾವ ಬೀರಿದ ಫ್ರೆಂಚ ಕವಿಗಳು ; ಚಾರ್ಲ್ಸ ಬಾಡ್‌ಲೇಅರ್, ಆರ್ಥರ್ ರ್‍ಯಾಂಬೋ, ಸ್ಟೆಫಾನ್ ಮ್ಯಾಲಾರ್ಮೆ, ಲಾಫೋರ್ಗ ಮುಂತಾದವರ ಹೆಸರನ್ನು ನವ್ಯತೆಗೆ ಜೋಡಿಸಿ ಹೇಳಲಾಗಿದೆ. ಆದರೆ ಕನ್ನಡದಲ್ಲಿ ಇವನ ಹೆಸರು ನಾಮಮಾತ್ರವಾಗಿಯೋ ಬಂದಿರುವುದರಿಂದ ಅವರ ಕಾವ್ಯದ ಯಥಾರ್ಥಜ್ಞಾನವನ್ನು ಪಡೆದುಕೊಳ್ಳುವ ಪ್ರಯತ್ನವನ್ನು ನಾವು ಮಾಡಿದಂತೆ ತೋರುವುದಿಲ್ಲ. ಹಾಗೆ ಮಾಡಿದ್ದರೆ ನಮ್ಮ ನವ್ಯಪ್ರಯೋಗದಲ್ಲಿ ಬೇರೆ ತರಹದ ವೈಶಿಷ್ಟ್ಯಗಳು ಬಂದು ಸೇರುತ್ತಿದ್ದವೋ ಏನೋ !

## II. ಚಾರ್ಲ್ಸ ಬಾಡ್‌ಲೇಅರ್ (Charles Baudelaire : ೧೮೨೧–೧೮೬೭)

ಇವನೊಬ್ಬ ಫ್ರಾನ್ಸ ದೇಶದ ನಾಗರಕವಿ. ಇವನ Les Fleurs du Mal (ದುರಿತ ಪುಷ್ಪಗಳು : Flowers of Evil)[೧] ಎಂಬ ಕವಿತಾ ಸಂಗ್ರಹ (೧೮೫೭) ಈಗಲೂ ಜನಪ್ರಿಯವಾಗಿದೆ. ಆದರೆ ಇದು ಬರಿಯ "ದುರಿತ ಪುಷ್ಪವಲ್ಲ; ಇದು ಸಂಶಯ, ದುಃಖ, ವೇದನೆ, ಬೀಭತ್ಸ, ದೌರ್ಬಲ್ಯ, ನಿರಾಶೆ, ದೇಹ-ಮನಸ್ಸಿನ ಕ್ಷೋಳೆ-ಇವುಗಳಂತೆ ಮಾನವ ಜೀವನದ ಅವನತ ಸ್ವರೂಪದ ಸಮಗ್ರ ಪುಷ್ಪಿತ ಕಾವ್ಯವೆಂತಲೂ ಇದನ್ನು ಕರೆಯಬಹುದು.

---

೧ Charles Baudelaire, Les Fleurs du Mal, bilingual edition (New York : Washington Square Press, 1962)

ಇವನ ಕಾವ್ಯ ಅನೇಕ ದೃಷ್ಟಿಯಿಂದ ನವ್ಯಕಾವ್ಯದ ಉಗಮವೆಂದು ಹೇಳಲು ಗಿದೆ. ಈ ಮತದ ಯಥಾರ್ಥತೆಯನ್ನು ಅವನ ಕೆಲವು ಕವಿತೆಗಳ ಪರಿಶೀಲನೆ ಯಿಂದ ಸಿದ್ಧಗೊಳಿಸಬಹುದು.

## ಸ್ಲೀಹ (Spleen)[3]

ಕ್ಷಯವಿರದ ದುರಿತಗಳ ಭಾರದ ಕೆಳಗೆ
ನರಳಾಡುವ ನನ್ನ ಜೀವದ ಮೇಲೆ
ಮೋಡಗವಿದ ಜಡವಾದ ಆಕಾಶ
ಬಿದ್ದು ಬಿಟ್ಟಿದೆ-
ಮಹಾಪಾತ್ರೆಯ ರಾಕ್ಷಸಾಕಾರದ
ಮುಚ್ಚಳದಂತೆ.

ನಮ್ಮನ್ನು ಸುತ್ತುಗಟ್ಟಿದ
ಕ್ಷಿತಿಜದಂಚಿನೊಳಗಿಂದ
ಸುರಿಯತೊಡಗಿದೆ ಹಗಲು:
ನಿಶೆಗಿಂತಲೂ ಕರಿದಾಗಿ
ನಿರಾಶೆಗಿಂತಲೂ ಜಡವಾಗಿ.

ಈ ಭೂಮಿ ಒಂದು ತೇವುಗೊಂಡ
ಕತ್ತಲು ಗವಿ. ಅಲ್ಲಿ
ಆಶೆ ಬೆದರಿದ ಬಾವಲಿ
ಗೋಡೆಗಳ ಮೇಲೆ ಪಕ್ಕ ಬಡಿಯುತ್ತಿಹುದು:
ಬೂರುಸುಗಟ್ಟಿದ ಒಳಮಾಳಿಗೆಯ ಮೇಲೆ
ತನ್ನ ತಲೆಯನಪ್ಪಳಿಸುತ್ತಿರಲು
ಕೆಳಗೆ ಬೀಳುತಿದೆ ಮೆತ್ತಿದ ಸುಣ್ಣ.

ಮಳೆಯ ದೀರ್ಘ ಧಾರೆಗಳು
ವಿಶಾಲ ಸೆರೆಮನೆಯ ಕಂಬಿಗಳಂತೆ
ಕಿಟಕಿಯಾಚೆ ಸೋರುತ್ತಿಹವು.
ನನ್ನ ಮಿದುಳಿನ ತಳದಲ್ಲಿ
ಹೇಸಿ ಜೇಡುಗಳ ಹಿಂಡು

---

3 Ibid, p. 131

ಮೌನದಲಿ ಓಡಾಡುತ್ತಿಹುದು
ಜಾಲಗಳ ಹೆಣೆಯುತ್ತಿಹುದು.

ಒಮ್ಮೆಲೆ ಗುಡಿಯ ಘಂಟಾನಾದ
ಆವೇಶದಲಿ ನೆಗೆದೇಳುತ್ತದೆ,
ಸ್ವರ್ಗದೆದುರಿಗೆ ನಿಂತು
ಹುಯಿಲಿಟ್ಟು ಚೀರುತಿದೆ-
ಮನೆಯಿರದ, ದಿಕ್ಕಿರದ,
ಎಲ್ಲೆಲ್ಲೋ ಅಲೆದಾಡುವ
ಆತ್ಮಗಳ ಆರ್ತನಾದದೊಲು
ಅಕ್ರಾಳವಿಕ್ರಾಳವಾಗಿ.

ನನ್ನ ಅಂತರಂಗದಲ್ಲಿ
ಶವಯಾನಗಳ ಸಾಲು
ಸಂಗೀತದ ಚೀತ್ಕಾರವಿಲ್ಲದೆ
ಮದ್ದಳೆಯ ಹುಯಿಲಿಲ್ಲದೆ
ಶಾಂತವಾಗಿ
ಸಾವಕಾಶವಾಗಿ
ಮುಂದೆ ಮುಂದೆ ಸರಿಯುತ್ತಿಹುದು.

ನಿರಂಕುಶ ಪ್ರಭುವಾಗಿ
ನನ್ನನ್ನು ಆಳುತ್ತಿರುವ
ಭೀತಿಯೆಂಬ ದುಷ್ಟದೈವ
ಬಾಗಿರುವ ನನ್ನ ತಲೆಬುರುಡೆಯ ಮೇಲೆ
ತನ್ನ ಕಪ್ಪು ಪತಾಕೆಯನ್ನು
ನೆಟ್ಟು ನಿಂತಿದೆ. (೧೮೫೭)

ಫ್ರೆಂಚ ಭಾಷೆಯಿಂದ ಮಾಡಿದ ಈ ಅನುವಾದದೊಳಗಿಂದಲೂ ಇದರ ಆಂತರಿಕ ಶಕ್ತಿ ಪ್ರಕಾಶಿತವಾಗಿದೆ. ಇದೊಂದು ವಿಷಾದ, ನಿರಾಶೆಗಳ ಉತ್ಕಟವಾದ ದುರಂತದರ್ಶನ. ಅಂತರಂಗವೇ ಇದರ ನಾಟ್ಯಭೂಮಿ. ಪ್ರತಿಮೆಗಳೇ ಇದರ ಪ್ರಮುಖ ಮಾಧ್ಯಮ. ಪ್ರತಿಮೆಗಳನ್ನು ವಾಸ್ತವ ಪರಿಸರದಿಂದ ಆಯ್ದುಕೊಂಡಿದ್ದರೂ ವಾಸ್ತವತೆಯನ್ನು ರೂಪಿಸಬೇಕೆಂಬ ಹವ್ಯಾಸ ಇಲ್ಲಿ ಕಾಣುವುದಿಲ್ಲ. ಅಂತಃಸತ್ಯವನ್ನು ಭಾವಪೂರ್ಣವಾಗಿ ರೇಖಿಸುವುದೇ ಇದರ ಉದ್ದೇಶವೆಂಬಂತಿದೆ. ಇದ

ಕ್ಕಾಗಿಯೇ ಇದನ್ನು "ಉದ್ವಾಸ್ತವತೆ"ಯು (Surrealism) ಪ್ರಥಮ ಆವಿಷ್ಕಾರವೆಂದು ಕರೆದರೂ ಸರಿಯಾದೀತು.

## III ಉದ್ವಾಸ್ತವತೆ :

ಉದ್ವಾಸ್ತವತೆ ನವ್ಯತೆಯ ಒಂದು ಮುಖ್ಯ ಅಂಗವಾಗಿ ಬಹಳ ಕಾಲದ ವರೆಗೆ ನಿಂತಿತ್ತೆಂಬುದನ್ನು ಎಲ್ಲರೂ ಒಪ್ಪುವ ವಿಷಯ. ಯಾಂತ್ರಿಕಜೀವನ ಮಹಾಯುದ್ಧ, ಸಾಮಾಜಿಕ ವಿಪ್ಲವಗಳ ಪರಿಣಾಮವಾಗಿ ಕವಿ ಮನಸ್ಸಿನ ಅಂತಃ ಪ್ರದೇಶವನ್ನು ಸೇರಿಕೊಂಡಿದ್ದು ನವ್ಯಕ್ರಾಂತಿಯ ಒಂದು ವಿಶೇಷವೆಂದು ಹೇಳಬಹುದು. ಸ್ಟ್ಯಾನ್ಲೇ ಬರ್ನ್‌ಶಾ (Stanely Burnshaw) ಎಂಬ ವಿಮರ್ಶಕನು ''Three Revolutions of Modern Poetry''[೩] ಎಂಬ ತನ್ನ ಲೇಖನದಲ್ಲಿ ಇದನ್ನೆಲ್ಲ ಸ್ಪಷ್ಟಗೊಳಿಸಿದ್ದಾನೆ. ಅಲ್ಲಿ ವ್ಯಕ್ತಗೊಳಿಸಿದ ವಿಚಾರಗಳನ್ನು ಕೆಳಗೆ ಸಂಕ್ಷೇಪವಾಗಿ ನಿರೂಪಿಸುತ್ತೇನೆ :

ಪಶ್ಚಿಮದ ಯಂತ್ರಮಾನವನು ಹೊರಗಣ ವಸ್ತು ಜಾತವನ್ನು ಆದರಿಸಲು ಕಲಿತಿದ್ದಾನೆ. ಕವಿಯ ಪ್ರತಿಕ್ರಿಯೆ ಮಾತ್ರ ಇದಕ್ಕೆ ವಿರುದ್ಧವಾಗಿದೆ. ಜಗತ್ತಿನ ಯಾಂತ್ರಿಕತೆ ಹೇಗೆ ಹೆಚ್ಚು ಹೆಚ್ಚಾಗಿ ಬೆಳೆಯತೊಡಗಿತೋ, ಅಷ್ಟೇ ತೀವ್ರತೆಯಿಂದ ಕವಿಯ ಮನಸ್ಸು ಅಂತರಂಗದ ಕಡೆಗೆ ಆಕೃಷ್ಟವಾಯಿತು. ಇದು 'ನನ್ನ' ತನದ ಉಧೃತವಾದ ಪತಾಕೆಯೆಂತಲೂ ಕರೆಯಬಹುದು. 'ನಾನು' ಎಂಬ ಪ್ರಥಮಾ ವಿಭಕ್ತಿಯು ಏಕವಚನ ಕಾವ್ಯದಲ್ಲಿ ಕೇಂದ್ರೀಕೃತವಾಗಿ ಸ್ಥಾನಾಪನ್ನವಾದುದೇನೋ ನಿಜ. ಆದರೆ ಇದು ತನ್ನ ಅಹಂಕಾರದ ಪ್ರತಿಷ್ಠೆಗಾಗಿ ಇರದೆ, ಬೇರೆ ಬೇರೆ ವ್ಯಕ್ತಿಗಳ ಭಾವಗಳನ್ನು ನಾಟ್ಯಮಯವಾಗಿ ಪ್ರಕಟಿಸಲು ಅಥವಾ ಮನಸ್ಸಿನ ವಿಶ್ಲೇಷಣೆಯನ್ನು ಮಾಡಲು ಉಪಯುಕ್ತವಾದ ಸಾಧನವೆಂದು ಅಂಗೀಕರಿಸಲಾಯಿತು. ಯಾಕೆಂದರೆ 'ನಾನು' ಎಂಬ ಪದದಲ್ಲಿ ಎಲ್ಲರನ್ನೂ ಅಳವಡಿಸಿಕೊಳ್ಳುವ ಶಕ್ತಿಯಿದೆಯೆಂಬುದು ಕವಿಗೆ ತಿಳಿದುಬಂತು.

ಆದರೆ ಇದಕ್ಕೂ ಹೆಚ್ಚಾಗಿ ನಮ್ಮ ಒಳಗಡೆಗಿರುವ ಪ್ರಜ್ಞಾತೀತವಾದ ಸುಪ್ತ ಮನಸ್ಸು ಕಾವ್ಯನಿರ್ಮಿತಿಯ ಮೂಲ ಸ್ಫೂರ್ತಿಯೆಂಬ ಅರಿವು ಬೆಳೆಯುತೊಡಗಿತು. ಆಫ್ರಿಕೆಯಂತೆ ವಿಶಾಲವಾದ ಕಪ್ಪು ಭೂಖಂಡದಂತೆ ಅಪೂರ್ವ ಶಕ್ತಿಯ ಒಂದು ಅನಾಕಲನೀಯವಾದ ಆಗರವೆಂದೂ, ನಮ್ಮೆಲ್ಲ ಭಾವ-ಕೃತಿಗಳ, ವಿಚಾರ-ವಿಕಾರಗಳ ಮೂಲ ಪ್ರೇರಣೆಯೆಂದೂ ಮಾನಸಶಾಸ್ತ್ರ ಹೇಳತೊಡಗಿತು. ಈ ವಿಚಾರದ

---

೩ Introduction, The Poem Itself, edited by Stanley Burnshaw (New York : Schocken Books, 1967), pp. XI–XLIV

ಸಂಪೂರ್ಣ ಪ್ರಭಾವ ಸಾಹಿತ್ಯದ ಮೇಲೆ ಬಿದ್ದು ಅದಕ್ಕೆ ಬೇರೆ ಸ್ವರೂಪವನ್ನೇ ಕೊಟ್ಟಿತು.

ಉದ್‌ವಾಸ್ತವತೆ ೧೯ನೆಯ ಶತಮಾನದಲ್ಲಿ ಅತ್ಯಂತ ಪ್ರಭಾವಶಾಲಿಯಾದ ನಿಸರ್ಗವಾದವನ್ನು (Naturalism) ಪ್ರತಿಭಟಿಸಿತು. ನಿಸರ್ಗವಾದದ ಜನಕನೆಂದೆಣಿಸಿಕೊಂಡ ಫ್ರೆಂಚ ಲೇಖಕ ಎಮೀಲ ಝೋಲಾ (Emile Zola : ೧೮೪೦-೧೯೦೨) ಈತನು ಸಾಹಿತ್ಯ ರಚನೆಯನ್ನು ವೈಜ್ಞಾನಿಕ ತತ್ವಗಳ ಮೇಲೆ ಪ್ರಸ್ಥಾಪಿಸಲು ಪ್ರಯತ್ನಪಟ್ಟನು. ವ್ಯಕ್ತಿ, ಸಮಾಜಗಳನ್ನು ವೈಜ್ಞಾನಿಕ ದೃಷ್ಟಿಯಿಂದ ಪರಿಶೀಲಿಸಬೇಕು. ಮನುಷ್ಯ ಸ್ವಭಾವ ಭೌತಿಶಾಸ್ತ್ರ, ರಸಾಯನ ಶಾಸ್ತ್ರಗಳಂತೆ ವಿಶಿಷ್ಟ ನಿಯಮಗಳಿಂದ ಬದ್ಧವಾಗಿದೆ. ಅವನಿಗೆ ಇಚ್ಛಾಸ್ವಾತಂತ್ರ್ಯವಿಲ್ಲ; ಅವನು ನಿಸರ್ಗದ ನಿಯಮಗಳಿಗೆ ಅಧೀನನಾಗಿದ್ದಾನೆ. ಅದೇ ಅವನ ನಿಯತಿ. ಇದನ್ನು ಸ್ಪಷ್ಟಗೊಳಿಸಬೇಕಾದರೆ ಪರಿಸರದ ಸಣ್ಣಪುಟ್ಟ ವಸ್ತುಗಳನ್ನೆಲ್ಲ ಚೆನ್ನಾಗಿ ಅವಲೋಕಿಸಿ (observation) ಸಮಗ್ರವಾಗಿ, ಭಾವರಹಿತವಾಗಿ ವಾಸ್ತವಿಕ ವರ್ಣನೆಯನ್ನು ಮಾಡಬೇಕು. ಇದು ಲೇಖಕನ ವ್ಯಕ್ತಿತ್ವ ಬಾಹಿರವಾಗಬೇಕು.

ಈ ವಿಚಾರಗಳಿಗೆ ವಿರುದ್ಧವಾಗಿ ಉದ್‌ವಾಸ್ತವತೆಯ ಆಂದೋಲನ ಪ್ರಾರಂಭವಾಯಿತು. ಬಾಡ್‌ಲೇಅರ್‌ನ ಉದ್ಧೃತವಾದ ಕವಿತೆಯಲ್ಲಿ ಇದರ ಪೂರ್ಣ ಆವಿಷ್ಕಾರವನ್ನು ನಾವು ಕಾಣುವುದಿಲ್ಲ; ಆದರೂ ಇಲ್ಲಿ ಅಂತರಂಗದ ದರ್ಶನವಿದೆ; ನಿಸರ್ಗದ ನಿಯಮಗಳಿಂದ ನಾವು ಬದ್ಧರೆಂಬ ಪ್ರತೀತಿ ಕವಿಗೆ ಆಗದಿದ್ದರೂ, ತಾನು ಅನಾಕಲನೀಯವಾದ ನಿಯತಿಯ ಒಬ್ಬ ಕ್ಷುದ್ರ ಬಲಿಯೆಂಬ ಭಾವನೆ ಪ್ರಧಾನವಾಗಿದೆ.

ಆದರೆ ಉದ್‌ವಾಸ್ತವತೆಯ ಪ್ರಕಟ ಘೋಷಣೆಯನ್ನು ಆಂದ್ರೆ ಬ್ರೆಟಾಂ (Andr'e Breton) ಎಂಬ ಫ್ರೆಂಚ ಕವಿ ೧೯೨೦ರಲ್ಲಿ ಮಾಡಿ ಈ ವಿಚಾರಧಾರೆಯ ಅಸ್ತಿಭಾರವನ್ನು ಹಾಕಿದನು. ಇದರ ವಿಚಾರ ಪ್ರಣಾಲಿಯ ಪ್ರಕಾರ ಹೊರಗಿನ ವಸ್ತುಜಾತವೆಲ್ಲ ''Petite re'alite'' ಅಂದರೆ ಕ್ಷುದ್ರಸತ್ಯವೆಂಬ ತಿಳುವಳಿಕೆಯಾಗಿದೆ. ನಿಸರ್ಗದ ಅನುಕರಣವನ್ನೇ ಸಾಹಿತ್ಯದ ಉದ್ದೇಶವಾಗಿಟ್ಟುಕೊಂಡವರು ವಾಸ್ತವವಾದಿಗಳು (Realism), ನಿಸರ್ಗವಾದಿಗಳು (Naturalism)-ಸಾಮಾನ್ಯವಾಗಿ ಜಗತ್ತಿನ ಮೇಲು ನೋಟದ ಆವಿಷ್ಕಾರವನ್ನು ಮಾಡಿ ಛಾಯಾ ಚಿತ್ರಕಾರರೊಡನೆ ಸ್ಪರ್ಧಿಸಿದರೇ ಹೊರತು ನಿಜವಾದ ಕಲಾಕೃತಿಯನ್ನು ನಿರ್ಮಿಸಲಿಲ್ಲ

ಈ ವರೆಗೆ ಹೊರಗಣ ಜಗತ್ತನ್ನರಿತುಕೊಳ್ಳಲು ಪಾಶ್ಚಿಮಾತ್ಯರು ತಮ್ಮ ಬೌದ್ಧಿಕ ವ್ಯಾಪಾರವನ್ನು, ತರ್ಕನಿಷ್ಠವಾದ ವೃತ್ತಿಯನ್ನು ನಿಶಿತಗೊಳಿಸಿದರು. ಸಾವಿರಾರು ವರ್ಷಗಳವರೆಗೆ ಬುದ್ಧಿಯೇ ಜ್ಞಾನದ ಪ್ರಮುಖ ಸಾಧನವಾಗಿ ಕೊನೆಗೆ ನಮ್ಮ ಪೂಜಾರ್ಹವಾದ ದೈವತವಾಗಿ ಪರಿಣಮಿಸಿತು. ಇದಕ್ಕೆ ವಿರುದ್ಧವಾಗಿ

ಬುದ್ಧಿಯ ಬಂದಿವಾಸದಿಂದ ಬಿಡುಗಡೆಯನ್ನು ಪಡೆಯುವುದೇ ಉದ್‌ವಾಸ್ತವತೆ ತನ್ನ ಮುಖ್ಯ ಕಾರ್ಯವನ್ನಾಗಿ ಕೈಕೊಂಡಿತು. ಯಾಕೆಂದರೆ ಸತ್ಯ ಬುದ್ಧಿಯಳವಿನ ಆಚೆಗಿದ್ದು ಬಾಹ್ಯ ಇಂದ್ರಿಯಗಳಿಗೆ ನಿಲುಕದ ಒಂದು ಅನಂತ ಶಕ್ತಿಯಾಗಿದೆ. ಪಂಚೇಂದ್ರಿಯಗಳಿಗೆ ಜ್ಞಾತವಾಗುವ ವಸ್ತುಜಾತದ ಬಗ್ಗೆ ಉದ್‌ವಾಸ್ತವತೆಗೆ ಅಷ್ಟು ಆದರವಿರಲಿಲ್ಲ. ಅಗಮ್ಯವಾದ ಚೈತನ್ಯವೇ ದೈವವೆಂದು ಅದರ ದರ್ಶನವನ್ನು ಪಡೆಯಲು ನಮ್ಮ ಆಂತರಿಕ ಶಕ್ತಿಗಳನ್ನು ತೀಕ್ಷ್ಣಗೊಳಿಸಬೇಕು. ಅಂದರೆ ನೇರವಾದ ಸತ್ಯದ ಸಾಕ್ಷಾತ್ಕಾರ ನಮ್ಮ ಅಂತರ್ದೃಷ್ಟಿಗೆ (intuition) ಮತ್ತು ಪ್ರತಿಭಾಶಕ್ತಿಗೆ (imagination) ಸಾಧ್ಯವೆಂಬುದು ಉದ್‌ವಾಸ್ತವತೆಯ ಆಳವಾದ ನಂಬಿಗೆ. ಈ ವಿಚಾರಸರಣಿ ತೀವ್ರವೇ ಎಲ್ಲ ಕಲೆಗಳಿಗೂ ಪ್ರೇರಕಶಕ್ತಿಯಾಗಿ, ಕವಿಗಳಿಗೆ ಸ್ಫೂರ್ತಿಸ್ಥಾನವಾಗಿ ಜಗತ್ತಿನ ಬೇರೆ ಬೇರೆ ದೇಶಗಳಲ್ಲಿ ಬೆಳೆದುಬಿಟ್ಟಿತು.

ಸ್ವಲ್ಪದರಲ್ಲಿ ಈ ಆಂದೋಲನದ ಪ್ರಮುಖ ತತ್ವಗಳೆಂದರೆ :

ಹೊರಗಿನ ವಸ್ತುಜಾತವೆಲ್ಲ ಒಂದು ಮಾಯೆ; ಅದರ ಹಿಂದುಗಡೆಗೆ ಬೆಳಗಿನಿಂತ ಸತ್ಯವನ್ನು ಅರಿತುಕೊಳ್ಳಬೇಕು. ನಾವು ಮುಖ್ಯವಾಗಿ ಮನಸ್ಸಿನ ಅಂತರಂಗದಲ್ಲಿ ಸಂಶೋಧನವನ್ನೂ ನಡೆಸಬೇಕು. ಅದಕ್ಕಾಗಿ ಬುದ್ಧಿಯ, ತರ್ಕಶಾಸ್ತ್ರದ ಮುಂಗಮುಷ್ಟಿಯಿಂದ ಬಿಡುಗಡೆಹೊಂದಿ ಸ್ವಪ್ನಲೋಕದ ಪ್ರಜ್ಞಾತೀತವಾದ ನಿಗೂಢಲೋಕದಲ್ಲಿ ಪ್ರತಿಭೆಯ ಕುದುರೆಯನ್ನೇರಿ ಸಂಚರಿಸಬೇಕು. ಸ್ವಪ್ನವೇ ವಾಸ್ತವತೆಗಿಂತ ಹೆಚ್ಚು ಸತ್ಯವಾಗಿದೆ. ಸ್ವಪ್ನಲೋಕದಂತೆ ವಾಸ್ತವ ಜೀವನವೂ ನಿಯಮ (rational law) ರಹಿತವಾಗಿದೆ, ಕ್ರಮ (order) ವಿಹೀನವಾಗಿದೆ. ಸಾಮಾನ್ಯವಾಗಿ ತರ್ಕಶಾಸ್ತ್ರ, ವಿಜ್ಞಾನ ಮುಂತಾದ ಬೌದ್ಧಿಕ ಅಭ್ಯಸನ ಪ್ರಕಾರಗಳು (disciplines) ನಮ್ಮ ವಿಶ್ವ ನಿಯಮ ಹಾಗೂ ಕ್ರಮಗಳಿಂದ ಬದ್ಧವಾಗಿದೆಯೆಂಬ ಊಹೆ (hypothesis) ಯ ಮೇಲೆ ನಿಂತಿವೆ. ಭೌದ್ಧಿಕ ಶಾಸ್ತ್ರವಂತೂ (Physics) ಸದ್ಯಕ್ಕೆ ನಿರ್ಣಯದ ಅಸಾಧ್ಯತೆಯ (Principle of indeterminacy) ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದೆ.

ವಿಜ್ಞಾನದ ಬುದ್ಧಿವಾದಕ್ಕೆ ವಿರುದ್ಧವಾಗಿ ಉದ್‌ವಾಸ್ತವತೆ ಅಕ್ರಮ ಹಾಗೂ ಅನಿಯಮಿತತೆಯನ್ನು ಮೂಲತತ್ವವನ್ನಾಗಿ ಸ್ವೀಕರಿಸಿದೆ. ಜೀವನದಲ್ಲಿ ಒದಗುವ ಘಟನೆಗಳೆಲ್ಲ ಅನಿರೀಕ್ಷಿತವಾಗಿಯೇ ಸಂಭವಿಸುತ್ತವೆ. ಜದೇ (chance) ನಮ್ಮ ಅದೃಷ್ಟ. ಈ ದೃಷ್ಟಿಯಿಂದ ನಮ್ಮ ಬಾಳುವೆ ಸರ್ವತೋಪರಿ ಆಪದ್‌ಗ್ರಸ್ತವಾಗಿದೆ (hazard, ಯೆಂದು ಹೇಳಬೇಕಾಗುವುದು.

ಅನಿಯಮಿತತೆಯೆಂದು ದಿವ್ಯತ್ವದ ಅಭಿವ್ಯಕ್ತಿಯೆಂದು ಈ ಮತಪ್ರಣಾಲಿಯ ನಂಬಿಕೆ. ಇದರ ಪರಿಣಾಮವಾಗಿ ಬರಬಹುದಾದ ನಿರಾಶೆಗೆ ಬಲಿಯಾಗದೆ ಅನಿಯಮಿತತೆ ಅನಂತತೆಯ (infinity) ದೃಶ್ಯಮುಖವೆಂಬ ಭಾವನೆಯಿಂದ ಅದರ

ದರ್ಶನವನ್ನು ಪಡೆಯಲು ಪ್ರಯತ್ನಿಸಬೇಕು. ಆದರೆ ಉದ್ವಾಸ್ತವತೆಯು ಅನ್ವೇಷಣೆಯನ್ನು ಮಾಡಿ ಅದರ ಆಂತರಿಕ ಸ್ವರೂಪವನ್ನು ತಿಳಿದುಕೊಳ್ಳಲು ವಿಜ್ಞಾನ ಅಥವಾ ಧರ್ಮಸಂಸ್ಥೆ ಯಾವ ಆಸ್ಥೆಯನ್ನೂ ತೋರಿಸುವದಿಲ್ಲ. ನಿಜವಾಗಿ ನೋಡಿದರೆ, ಉದ್ವಾಸ್ತವತೆ ವಿಜ್ಞಾನ ಮತ್ತು ಧರ್ಮಗಳ ಅನೇಕ ವಿಶೇಷಗಳನ್ನು ಯಾವ ಆತಂಕವೂ ಇಲ್ಲದೆ ಅನುಸರಿಸಲು ಪ್ರಯತ್ನ ಮಾಡಿದೆ. ಅತೀತದ ದರ್ಶನವನ್ನು ಪಡೆಯಬೇಕೆಂಬ ಹವ್ಯಾಸವನ್ನು ಧರ್ಮದಿಂದಲೂ, ಸೃಷ್ಟಿಯ ಅಭ್ಯಾಸವನ್ನು ಕೂಲಂಕಷವಾಗಿ, ನಿರ್ವಿಕಾರವಾಗಿ ಶುದ್ಧವಾಸ್ತವ ದೃಷ್ಟಿಯಿಂದ (objectivity) ಮಾಡಲು ತೊಡಗಿ, ಸರ್ವಸಮ್ಮತವಾದ ಪ್ರಯೋಗಗಳ ಮೂಲಕ ಪಡೆದ ನಿರ್ಣಯಗಳನ್ನು ಪ್ರಕಟಿಸುವ ಛಲವನ್ನು ವಿಜ್ಞಾನದಿಂದಲೂ ಸ್ವೀಕರಿಸಿದೆ.

ಧರ್ಮಸಂಸ್ಥೆಗಳಲ್ಲಿ ಬಳಕೆಯಲ್ಲಿರುವ ವಿಫಲವಾದ ಯಾಂತ್ರಿಕ ವಿಧಿಗಳ ಹಾಗೂ ದೈವತ್ವದ ಬಗ್ಗೆ ಇರುವ ನಿಶ್ಚಿತ ವಿಚಾರಗಳ ಭಾರದ ಕೆಳಗೆ ಬಗ್ಗಿ ಹೋಗಟಿ ತಮ್ಮ ಅಂತಃಸಂವೇದನೆಯನ್ನು ತೀಕ್ಷ್ಣವಾಗಿಸಿ ಅನಂತ ಸತ್ಯದ ಸಾಕ್ಷಾತ್ಕಾರವನ್ನು ಪಡೆಯುವುದೇ ಉದ್ವಾಸ್ತವತೆಯ ಗುರಿ. ಹೀಗೆ ಸತ್ಯದ ಜೀವಂತ ಅನುಭವವನ್ನು ಗಳಿಸಿಕೊಳ್ಳುವ ಹಟವನ್ನು ಹಿಡಿದ ಕಾರಣ ಇದು ಅನುಭಾವದ (Mysticism) ವಲಯದಲ್ಲಿ ಸೇರಿಕೊಳ್ಳುತ್ತದೆ. ವಿಮರ್ಶಕರು ಬಾಡ್ಲೇಅರ್‌ನ ಜೀವನ ಮತ್ತು ಸಾಹಿತ್ಯದಲ್ಲಿ ಅನುಭಾವಿಯ ಲಕ್ಷಣಗಳನ್ನು ಕಂಡಿದ್ದಾರೆ. ಅವನು ಮೊದಮೊದಲು ಹಶೀಶ್ ಮುಂತಾದ ಅಮಲು ಪದಾರ್ಥಗಳನ್ನು ಸೇವಿಸಿ, ತನ್ನ ಪ್ರಜ್ಞೆಯ ವಿಸ್ತಾರವನ್ನು ಪಡೆದು, ಅದರ ಪರಿಣಾಮವಾಗಿ ಒಂದು ಕೃತಕ ಸ್ವರ್ಗವನ್ನೇ ನಿರ್ಮಿಸಿದನು. ಅವನ ''Les Paradis Artificiels'' ಎಂಬ ಗದ್ಯಕೃತಿಯಲ್ಲಿ ಈ ಸ್ವರ್ಗದ ಸಂದರ್ಶನವನ್ನು ಪಡೆಯಬಹುದು. ಇದರಲ್ಲಿ ಮತ್ತು ಅವನ ಅನೇಕ ಕವಿತೆಗಳಲ್ಲಿ ಅವನ ಕಾಲದ ಕವಿಗಳಾದ ರ್‍ಯಾಂಬೋ (Rimbaud), ಮ್ಯಾಲಾರ್ಮೆ (Mallarm'e), ವ್ಹರ್ಲೇನ (Verlaine) ಮುಂತಾದವರಿಗೆ ಬಾಡಲೇಅರ್‌ನು ನಿಜವಾಗಿಯೂ ದಾರ್ಶನಿಕನೆಂಬ ಮಾತು ಮನದಟ್ಟಾಗಿತ್ತು. ಕೆಲವು ಕಾಲದ ನಂತರ ಅಮಲು ಪದಾರ್ಥಗಳು ದೇಹ ಮನಗಳ ನಾಶಮಾಡುವವೆಂಬುದನ್ನು ತಿಳಿದುಕೊಂಡು ಅವುಗಳ ಸೇವನೆಯನ್ನು ಬಿಟ್ಟುಕೊಟ್ಟನು. ಹೀಗೆ ಶುದ್ಧ ಸಂವೇದನೆಯ ಅರಿವು ಅವನ ಒಳ್ಳೆಯ ಕವಿತೆಗಳಲ್ಲಿ ಕಾಣಬಹುದು. ನಿಸರ್ಗವು ಸತ್ಯಲೋಕದ ಪ್ರತೀಕವೆಂಬ ದರ್ಶನವನ್ನು ಕವಿಯು "Correspondances" "ಪ್ರತಿರೂಪಗಳು" ಎಂಬ ಕವನದಲ್ಲಿ ನಿರೂಪಿಸಿದ್ದಾನೆ. ಇದು ಮುಂದೆ ಬರಲಿರುವ ಬಹಳ ಕಾಲದವರೆಗೆ ತನ್ನ ಪ್ರಭಾವವನ್ನು ಬೀರಿದ "ಪ್ರತೀಕವಾದ" (symbolism) ಕ್ಕೆ ನಾಂದಿಯಾಗಿ ಬೆಳಗಿತೆಂಬುದರಲ್ಲಿ ಸಂಶಯವಿಲ್ಲ. ಬೇರೆ ಬೇರೆ ಇಂದ್ರಿಯಗಳ ಪ್ರಕ್ರಿಯೆಗಳನ್ನು ಮಿಶ್ರಣಗೊಳಿಸಿ ಏಕತೆಯ ಅನುಭವವನ್ನೂ ಅನಂತತೆಯ ದರ್ಶನವನ್ನೂ ಈ ಕವಿತೆಯಲ್ಲಿ ಮಾಡಿಕೊಡುತ್ತಾನೆ :

## ಪ್ರತಿರೂಪಗಳು (Correspondances)

ನಿಸರ್ಗವೊಂದು ಭವ್ಯದೇವಾಲಯ;
ಮಹಾವೃಕ್ಷಗಳು ಅದರ ಸಜೀವ ಸ್ತಂಭಗಳು.
ನಿತ್ಯ ಗುಣುಗುಣಿಸುತ್ತಿಹವು
ತಿಳಿವಿನಾಚೆಯ ಶಬ್ದಗಳನ್ನು.

ಮಾನವನು ಅಜ್ಞಾತವಾದ
ಈ ಸಾಂಕೇತಿಕ ಅರಣ್ಯದೊಳಗಿಂದ
ತನ್ನ ಜೀವನಯಾತ್ರೆಯನ್ನು
ಸಾಗಿಸುವಾಗ, ಈ ವೃಕ್ಷಗಳು
ಅವನನ್ನು ಚಿರಪರಿಚಿತನಂತೆ
ಕಣ್ಣಿಟ್ಟು ಕಾವಲಾಗಿ ನಿಲ್ಲುವವು.

ದೀರ್ಘವಾದ ಪ್ರತಿಧ್ವನಿಗಳು
ಅತೀತದಲ್ಲಿ ಸಂಗಮಿಸಿ
ಗೂಢ ಗಂಭೀರವಾದ
ಅದ್ವೈತದಲ್ಲಿ ಲೀನವಾಗುತ್ತವೆ.

ಕತ್ತಲೆ ಬೆಳಕುಗಳ ಎರಡು
ಅನಂತ ವಿಶ್ವಗಳಂತೆ
ಶಬ್ದಗಂಧವರ್ಣಗಳು
ಸಂವಾದಿಯಾಗಿ
ಒಂದಕ್ಕೊಂದರಲ್ಲಿ ಬಿಂಬಿತವಾಗುತ್ತವೆ

ಕೆಲವು ಗಂಧಗಳು
ಎಳೆಗೂಸಿನ ಮೈವಾಸನೆಯಂತೆ
ಕಾಷ್ಠವಾದ್ಯದ ಸಂಗೀತದಂತೆ
ಹುಲ್ಲುಗಾವಲಿನ ಹಸಿರಿನಂತೆ
ಶಾಂತ ರಮ್ಯವಾಗಿಹವು.

ಮತ್ತೆ ಕೆಲವು
ಸಂಪನ್ನವಾಗಿ
ಉನ್ಮತ್ತವಾಗಿ

ಮರ್ತ್ಯವಾಗಿದ್ದರೂ
ಅನಂತತೆಯಂತೆ ಸರ್ವವ್ಯಾಪಿಯಾಗಿ
ಸಸ್ಯಗಂಧದಂತೆ
ರಾಳದಂತೆ
ಕಸ್ತೂರಿಯಂತೆ
ಪನ್ನಂಬರದಂತೆ
ಉತ್ಕಟವಾದ ವಾಸನೆಯಂತೆ
ದೇಹಾತ್ಮಗಳ ಪರಮಾನಂದವನ್ನು
ಗೀತಿಸುತ್ತವೆ ೪ (೧೮೫೭)

ಈ ಕವಿತೆಯ ಶೀರ್ಷಿಕೆ ಬಹುವಚನದಲ್ಲಿದೆಯೆಂಬುದನ್ನು ನೋಡಿದರೆ, ಜಗತ್ತಿನ ವಿವಿಧ ವಸ್ತುಗಳಲ್ಲಿಯೂ, ಇಂದ್ರಿಯ ಹಾಗೂ ಆತ್ಮದಲ್ಲಿಯೂ, ಭೌತಿಕ ಹಾಗೂ ಅಧಿಭೌತಿಕ ಲೋಕಗಳಲ್ಲಿಯೂ — ವಿಶ್ವದ ಎಲ್ಲ ಸ್ತರಗಳಲ್ಲಿಯೂ ಏಕಾತ್ಮತೆಯಿದೆಯೆಂಬ ದರ್ಶನವೇ ಈ ಕಾವ್ಯದ ಮಧ್ಯಬಿಂದುವಾಗಿದೆಯೆಂಬುದು ಸ್ಪಷ್ಟವಾಗುತ್ತದೆ.

"ನಾನು ನನ್ನ ಆತ್ಮದ ಮುಖಾಂತರವಾಗಿ
ವಸ್ತುಜಾತಗಳ ಮೇಲೆ ಬೆಳಕು ಬೀರುತ್ತೇನೆ.
ಈ ದರ್ಶನವನ್ನು ಬೇರೆ ಆತ್ಮಗಳಿಗೆ ತಲುಪು
ವಂತೆ ಮಾಡುವುದೇ ನನ್ನ ಆಶೆ" ೫

ಎಂದು ಬಾಡಲೇರ್ ತನ್ನ ಒಂದು ನಿಬಂಧದಲ್ಲಿ ಹೇಳಿದ್ದಾನೆ. ಆಧುನಿಕ ಸಾಹಿತ್ಯದ ಮೇಲೆ ಈ ಕವಿತೆಯಷ್ಟು ಮತ್ತಾವ ಕವಿತೆ ತನ್ನ ಪ್ರಭಾವಬೀರಿಲ್ಲವೆಂದು ಇಂದಿನ ವಿಮರ್ಶಕರ ಮತವಾಗಿದೆ.

ಆದರೂ "ನಾನೊಬ್ಬ ಶಾಪಗ್ರಸ್ತ ಜೀವಿ" ಎಂಬ ಭಾವನೆ ಬಾಡಲೇರ್‌ನ ಮನಸ್ಸಿನ ಆಳದಲ್ಲಿ ಹುದುಗಿಕೊಂಡಿದೆ. ಮೃತ್ಯುವಿನ ವಿಚಾರ ಅವನನ್ನು ಯಾವಾಗಲೂ ಪೀಡಿಸುತ್ತದೆ. ಕಾಲದ ಕೈಯಲ್ಲಿ ಸಿಕ್ಕ ಒಂದು ಬರಿಗೊಂಬೆಯೆಂಬ ಭಾವನೆ ಅವನನ್ನು ಕಾಡುತ್ತದೆ.

---

೪. Baudalaire, p. 161
೫. The Poem Itself, P. 9

# ಗಡಿಯಾರ[೧]

ಭಯಂಕರ ಗಡಿಯಾರ !
ಕರುಣೆಯಿಲ್ಲದ ದೇವ,
ಅನಂತ ಶಕ್ತಿಯವತಾರ,
ಹಗಲಿರುಳೂ ಉಸುರುತ್ತಿಹುದು :
"ನೆನಪಿರಲಿ, ನೆನಪಿರಲಿ, ಎಚ್ಚರ"

ವೇದನೆಯು ತೀಕ್ಷ್ಣ ಬಾಣವೆಂದರೆ
ಒಂದು ಕ್ಷುದ್ರ ಗಳಿಗೆ,
ನಿನ್ನೆದೆಗೆ ಗುರಿಯಿಟ್ಟು
ಒಳ ಹೊಕ್ಕು
ನಿತ್ಯಕಂಪನಗೊಳ್ಳುತ್ತದೆ.

ಉಗಿಯಂತಿರುವ
ಮನಸ್ಸಿನಾಲ್ಹಾದ
ಕ್ಷಿತಿಜದಾಚೆ, ಕಣ್ಣಳವಿನಾಚೆ
ಅತ್ಯಂತ ತ್ವರೆಯಿಂದ
ಅಪ್ಸರೆಯಂತೆ
ಮಾಯವಾಗುತ್ತದೆ
ಮರ್ತ್ಯಜೀವಿಯು ಪಾಲಿಗೆ ಬಂದ
ಸಂತೋಷದ ಒಂದೊಂದು ತುಣುಕನ್ನೂ
ನಿಮಿಷ ನುಂಗಿ ಬಿಡುತ್ತದೆ.

ಉಸುರುತ್ತಿಹುದು ನಿಮಿಷ
ತಾಸಿಗೆ ಮೂರುಸಾವಿರದಾ ಆರು ನೂರು ಸಲ :
"ನೆನಪಿರಲಿ, ನೋಡಲ್ಲಿ,
ಪಕ್ಕಗಳಿದ್ದ ಕೀಟವೊಂದು
ಸದ್ಯ ನಿನ್ನ ರಕ್ತನಾಳದ ಮೇಲೆ ಕುಳಿತು
ಕಿರುಚುತ್ತಿಹುದು :
" 'ಇನ್ನಿಲ್ಲ' ಎಂಬುದು ನನ್ನ ಹೆಸರು,

೧, Baudelaire, p. 35

ನಾನು ನಿನ್ನ ನೇತ್ರರ ಹೀರಿ
ಹಾರಿ ಹೋಗುತ್ತೇನೆ.

ನಿತ್ಯಂ ಸ್ಮರ !
ಸ್ಮರಿಸುತ್ತಿರು ನಿನ್ನ ಮರಣವನ್ನು
ನನ್ನ ನಾಲಗೆ
ನನ್ನ ಕಬ್ಬಿಣಕಂಠ
ಮಾತಾಡುವುದಿಲ್ಲ—
ಓ ಕ್ಷುದ್ರ ಜೀವಿಯೇ
ಈ ನಿಮಿಷಗಳು
ಸುವರ್ಣಮಯವಾಗಿದ್ದರೂ
ಜಾರಿ ಹೋಗುತ್ತವೆ.
ನೀನೇನೂ ಯುವಕವಲ್ಲ.
ನೆನಪಿರಲಿ !
ತಟ್ಟೆಯಲ್ಲಿರುವ ಉಸುಕನ್ನು
ಚೆನ್ನಾಗಿ ತೊಳೆ,
ನೆನಪಿರಲಿ !

ನಿನ್ನನ್ನು ಗೆದೆಯಲು
ಕಾಲ ನಿನ್ನನ್ನು
ಮೋಸಗೊಳಿಸುವ ಕಾರಣವಿಲ್ಲ.
ಅತ್ಯಂತ ಬಲಶಾಲಿಯಾಗಿದ್ದಾನೆ
ನಿನ್ನ ವೈರಿ !
ಆಟ ಸುರುವಾದೊಡನೆಯೇ
ನಿನ್ನ ಸೋಲು ನಿಶ್ಚಿತವಾಯಿತು.

ಹಗಲು ಇಳಿದು ಹೋಗಿದೆ,
ಇರುಳು ಬೆಳೆಯತೊಡಗಿದೆ,
ನೋಡು,
ಈ ಆಳವಾದ ಕಂದರದಲ್ಲಿ
ಕಾಲವಿನ್ನೂ ತೃಷಾರ್ತವಾಗಿಯೇ ಇದೆ.
ಗಡಿಯಾರದ ಉಸುಕು ಜಾರಿ ಹೋಗಿದೆ —
ಇನ್ನು ತಡವಿಲ್ಲ.

ಶೀಘ್ರದಲ್ಲಿಯೇ ಗಡಿಯಾರದ ಗಂಟೆ
ಬಡಿಯುತೊಡಗುವದು—

ಸಂಕಟಗಳನ್ನು ನಿನ್ನ ಮೇಲೆ ಹೇರಿದ
ನಿನ್ನ ಅದೃಷ್ಟ,
ನವ ವಧುವಿನಂತಿರುವ
ಅಚ್ಚಳಿಯದುಳಿದ
ನಿನ್ನ ಸದ್ಗುಣ,
ಕೊನೆಯ ಕಾಲದ ವಿಶ್ರಾಮಧಾಮವಾಗಿರುವ
ನಿನ್ನ ಪಶ್ಚಾತ್ತಾಪ,
ನಿನಗೆ ಏಕಕಂಠದಿಂದ ಹೇಳುವವು :

"ಏ ವೃದ್ಧ ಮನುಷ್ಯ,
ಸಾಯಿ !
ಇನ್ನು ನೀನು
ಏನು ಮಾಡಲೂ ಸಾಧ್ಯವಿಲ್ಲವಯ್ಯಾ,
ಬಹಳ ತಡವಾಗಿದೆ."

ಇಲ್ಲಿ ಗಡಿಯಾರದ ಪ್ರತೀಕದ ಮೂಲಕವಾಗಿ ಕಾಲದ ಅಪರಿಹಾರ್ಯವಾದ ಮನುಷ್ಯನ ಮೇಲಿರುವ ನಿರಂಕುಶ ಪ್ರಭುತ್ವವನ್ನು ನಾಟ್ಯಮಯವಾಗಿ ಚಿತ್ರಿಸಲಾಗಿದೆ. ನಿರಾಶಾಜನಕವಾದ, ಮರ್ತ್ಯಲೋಕಕ್ಕೆ ಅನಿವಾರ್ಯವಾದ ಅದೃಷ್ಟವನ್ನೂ, ಹಿಂದಿನ ಕವಿತೆಯಲ್ಲಿ ಸ್ಪಷ್ಟವಾದ ವಿಶ್ವದ ಏಕಾತ್ಮತೆಯ ದರ್ಶನವನ್ನೂ ಒಟ್ಟಿಗೆ ಸೇರಿಸಿ ನೋಡಿದರೆ ಇಲ್ಲಿಯ ವಿಷಾದವೊಂದು ಯೋಗವಾಗಿ ವ್ಯಕ್ತಿಯ ಪರಿಮಿತಿಯನ್ನು ಮೀರಿ ನಿಂತಿರುವ ಅತೀಂದ್ರಿಯ ಜೀವನದ ವೈಶಾಲ್ಯವನ್ನು ತೆರೆದು ತೋರಿಸುವ ಆಧ್ಯಾತ್ಮಿಕ ದರ್ಶನವಾಗುತ್ತದೆ.

ಇದೇ ರೀತಿಯಲ್ಲಿ ಬಾಡಲೇಅರ್‌ನ ಪ್ರೇಮಕಾವ್ಯವನ್ನೂ ಪರಿಶೀಲಿಸಬಹುದು. ಕವಿಯ ಜೀವನದಲ್ಲಿ ಅನೇಕ ಸ್ತ್ರೀಯರು ಬಂದು ಹೋದರು. ಅವರಲ್ಲಿಯೂ ಪ್ರಮುಖರೆಂದೆನಿಸದವರು — ಮರೀ (Marie), ಸಬಾತಿಯೇ (Sabatier) ಮತ್ತು ದುವಾಲ (Duval). ದುವಾಲ ಇವಳು ಕವಿಯ ಪ್ರಣಯಿನಿ (Mistress) ಯಾಗಿದ್ದಳು. ಅವಳು ''Black Venus'' ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿದ್ದಾಳೆ. ಮರೀ ಕವಿಯನ್ನು ತಿರಸ್ಕರಿದಳು; ಆದರೂ ಅವನು ಅವಳನ್ನು ಪ್ರೀತಿಸುವದನ್ನು ಬಿಡಲಿಲ್ಲ : "ನೀನು ನನಗೆ ಜೀವನವನ್ನೂ ಚೈತನ್ಯವನ್ನೂ ಕೊಟ್ಟೆ.... ನೀನು ನನ್ನ ಆರಾಧ್ಯದೈವತ; ನಿನ್ನನ್ನು ನಾನು ಪೂಜಿಸು

ತ್ತೇನೆ." ಕಾಮುಕತೆಯ ಸೋಂಕಿಲ್ಲದೆ ಇವಳ ಪ್ರೀತಿ ಕಾವ್ಯಕ್ಕೆ ಸ್ಫೂರ್ತಿಯಾಗಿ ನಿಂತಿತು. ಸಬಾತಿಯೇ ಕೂಡ ಅವನ ಕಾವ್ಯದ ಸ್ಫೂರ್ತಿಸ್ಥಾನ. ಕವಿ ತನ್ನನ್ನು ಕುರಿತು ಕವಿತೆಗಳನ್ನು ರಚಿಸಿದ್ದಾನೆಂದು ಗೊತ್ತಾದಕೂಡಲೆ ತನ್ನ ದೇಹವನ್ನು ಅವನಿಗೆ ಅರ್ಪಿಸಲು ಸಿದ್ಧಳಾದಳು. ಆದರೆ ಅವನು ಕಲ್ಪಿಸಿದ ದಿವ್ಯಪ್ರೀತಿಯು ಅಧಃಪಾತವಿದು ಎಂದುಕೊಂಡು ಅವಳನ್ನು ಧಿಃಕರಿಸಿದನು: "ಸಾಮಾನ್ಯ ಜನರು ಹೆಂಗಸನ್ನು ಕಾಮಿಸುತ್ತಾರೆ, ಕವಿಯು ಅವಳನ್ನು ಪೂಜಿಸುತ್ತಾನೆ." ಬಾಡ್‌ಲೇಅರ್ ಮುಖ್ಯವಾಗಿ ಕಾಮವನ್ನು ಉದಾತ್ತೀಕರಿಸಿ ಹೆಂಗಸಿನ ಪ್ರೀತಿಗೆ ಆಧ್ಯಾತ್ಮದ ಅಧಿಷ್ಠಾನವನ್ನು ನೀಡಿದನು. ಅವನು ತನ್ನ ಪ್ರೀತಿ-ಪಾತ್ರಳಿಗೆ ಹೇಳುವ ಮಾತು ಇವು:

> "ಭಕ್ತನು ದೇವರನ್ನು ಪ್ರೀತಿಸುವಂತೆ ನಾನು ನಿನ್ನನ್ನು ಪ್ರೀತಿಸುತ್ತೇನೆ. ನನ್ನ ಆತ್ಮದಲ್ಲಿ ರೂಪಿಸಿದ ಸೌಂದರ್ಯ ನನಗೆ ಶಕ್ತಿಯನ್ನೂ ಧೈರ್ಯವನ್ನೂ ಕೊಡುತ್ತದೆ. ನೀನೇ ನನ್ನನ್ನು ಕಾಯುವ ದೈವತ ಸ್ಫೂರ್ತಿ, ನನ್ನ ಪೂಜಾಸ್ಥಾನವಾದ ಕ್ರಿಸ್ತಮಾತೆ (Madonna)."

ಬೇರೆ ಬೇರೆ ಕಡೆಗಳಲ್ಲಿ ಕಂಡ ಅವನ ವಾಕ್ಯಗಳನ್ನು ಕನ್ನಡಿಸಿ ಇಲ್ಲಿ ಒಕ್ಕಟ್ಟಿಗೆ ಜೋಡಿಸಿ ಹೇಳಲಾಗಿದೆ.

ರಮ್ಯ ಕಾವ್ಯದಲ್ಲಿ (Romantic) ಈ ತರಹದ ಭಾವನೆಗಳು, ಪ್ರತಿಮೆಗಳು ವಿಪುಲವಾಗಿವೆಯೆಂಬ ಮಾತನ್ನು ಓದುಗರು ಸುಲಭವಾಗಿ ಗುರುತಿಸಬಹುದು. ಆದರೆ ಇದು ನಾಣ್ಯದ ಒಂದು ಮುಖವೆಂಬುದನ್ನು ಸ್ಪಷ್ಟವಾಗಿ ಹೇಳಬೇಕಾಗುತ್ತದೆ.

ಅದರ ಎರಡನೆಯ ಮುಖ ಹೆಂಗಸಿನ ಭೀಕರ ರೂಪವನ್ನು ಚಿತ್ರಿಸುತ್ತದೆ. ಅವಳೊಂದು ವಿಷಸರ್ಪ, ರಕ್ತವನ್ನು ಹೀರುವ ರಾಕ್ಷಸಿ (Vampire) ಎಂಬ ಭಾವನೆ ಕವಿಗೆ ಉಂಟಾಗಿದೆ. ಅವಳಿಗೆ ಗಂಡಸರನ್ನು ಗೆದ್ದು ಅವರ ಎದೆಯ ಮೇಲೆ ಕುಣಿಯುವ ಕಲೆ, ಶಕ್ತಿ ಪ್ರಾಪ್ತವಾಗಿವೆ. ಅವಳು ಪ್ರಿಯಕರನ ಎಲುಬಿನಲ್ಲಿರುವ ಸಾರ (marrow)ವನ್ನೇ ಹೀರಿ ಬಿಡುತ್ತಾಳೆ. ಬಹುತರವಾಗಿ ಅವನ ಕಾವ್ಯದಲ್ಲಿ ವ್ಯಕ್ತವಾದ ಹೆಣ್ಣು-ಗಂಡಿನ ಸಂಬಂಧದ ಬಗ್ಗೆ ದ್ವೇಷ, ತಿರಸ್ಕಾರಗಳೇ ಎದ್ದು ಕಾಣುತ್ತವೆ. ಹೆಣ್ಣು ಕವಿಗೆ ಸ್ಫೂರ್ತಿಯ ಸ್ಥಾನವಾಗಬಹುದಾದರೂ, ಅವಳು ಗಂಡಸರನ್ನು ಅವನತಿಯ ಮಾರ್ಗದಲ್ಲಿಯೇ ನೂಕಿಬಿಡುತ್ತಾಳೆ. ವಾಸ್ತವದಲ್ಲಿ ಹೆಂಗಸೆಂದರೆ ಆತ್ಮಹೀನವಾದ, ನೀತಿಯ ಗಂಧವೂ ಇಲ್ಲದ ಪಶು ವೆಂಬ ಪ್ರತ್ಯಯ ಕವಿಗೆ ತೀವ್ರವಾಗಿ ಬಂದು ಬಿಟ್ಟಿದೆ. ಇವಳ ಸ್ಪರ್ಶ ಮೃತ್ಯುವಿನ ಸ್ಪರ್ಶ; ಇವಳ ಹಾಸಿಗೆ ಪಾತಾಳದ ಅಧೋಲೋಕ.

> "ಪ್ರಣಯಿನಿಯನ್ನು ಮುದ್ದಿಸಲು ಬಗ್ಗಿದ ಗಂಡು ತನ್ನ ಗೋರಿಯನ್ನೇ ಅಪ್ಪಿಕೊಳ್ಳಲಿದ್ದಾನೆ."

ಬಾಡ್‌ಲೇಆರನ ಆತ್ಮ ಸ್ವರ್ಗ-ನರಕ, ದೇವ-ದಾನವ ಇವರ ನಡುವೆ ದೋಲಾಯಮಾನವಾಗಿದೆ. ಈ ಸ್ಥಿತಿಯಿಂದ ಉಂಟಾದ ಮನಸ್ಸಿನ ಉದ್ವೇಗ ಅವನ ಮನಸ್ಸಿನ ಮೇಲೆ ಪರಿಣಾಮ ಮಾಡಿದೆಯೇನೋ ಎಂಬ ಸಂಶಯ ಮೇಲಿಂದ ಮೇಲೆ ಬರುವದುಂಟು.

> "ನಿನ್ನ ಹೊರತು ನಾನು ಬೇರೆ ಯಾರನ್ನೂ ನಿಜವಾಗಿ ಪ್ರೀತಿಸಿಲ್ಲ; ಓ ನನ್ನ ದೇವರೇ, ನನ್ನನ್ನು ಕರುಣಿಸು. ನನ್ನ ಹೃದಯ ನರಕದ ಆಳವಾದ ಕೂಪಿನಲ್ಲಿ ಬಿದ್ದುಬಿಟ್ಟಿದೆ."

'My Heart Laid Bare' ಎಂಬ ತನ್ನ ಗದ್ಯ ಟಿಪ್ಪಣಿಗಳಲ್ಲಿ ತನಗಾದ ಉನ್ಮಾದ ರೋಗವನ್ನು ಕುರಿತು ಸ್ಪಷ್ಟವಾಗಿ ಬರೆಯುತ್ತಾನೆ :

> "ನಾನು ನನ್ನ ಉನ್ಮಾದ ರೋಗವನ್ನು (hysteria) ಸಂತೋಷದಿಂದಲೂ ಭೀತಿಯಿಂದಲೂ ಪಾಲಿಸಿ ಬೆಳೆಸಿದ್ದೇನೆ. ಈಗ ನಿತ್ಯವೂ ನನ್ನ ತಲೆ ತಿರುಗಲಾರಂಭಿಸಿದೆ. ಈ ಹೊತ್ತು, ೧೮೬೨ರ ಜಾನೇವಾರಿ ೨೩ನೆಯ ದಿನ, ನನಗೆ ಅಸಾದೃಶವಾದ ಒಂದು ಎಚ್ಚರಿಕೆಯನ್ನು ಕೊಡಲಾಯಿತು. ಹುಚ್ಚು ತನ್ನ ರೆಕ್ಕೆಯ ಗಾಳಿಯನ್ನು ನನ್ನ ಮೇಲೆ ಬೀಸುತ್ತಿದೆಯೆಂಬ ಅರಿವು ನನಗುಂಟಾಯಿತು."[೭]

ನಿಜವಾಗಿ ನೋಡಿದರೆ ಇವನ ಅಂತರಂಗವನ್ನು ಭೇದಿಸಿ ಎರಡು ಭಾಗ ಮಾಡಿದ ವೃತ್ತಿಗಳ ಎರಡು ತುದಿಗಳೂ ಪ್ರತಿಯೊಬ್ಬ ಮಾನವನಲ್ಲಿ ಇದ್ದೇ ಇರುತ್ತವೆ. ಇದನ್ನೇ ಬಾಡ್‌ಲೇಅರ್ ಹೀಗೆ ಸ್ಪಷ್ಟಗೊಳಿಸಿದ್ದಾನೆ:

> "ಪ್ರತಿಯೊಬ್ಬ ಮನುಷ್ಯನಲ್ಲಿ ಏಕಕಾಲಕ್ಕೆ ಎರಡು ನಿಷ್ಠೆಗಳು ಕಾಣಬರುತ್ತವೆ. ಒಂದು, ಭಗವಂತನನ್ನು ಕುರಿತು, ಎರಡನೆಯದು, ಸೈತಾನನನ್ನು ಕುರಿತು, ಇರುತ್ತದೆ ಭಗವಂತನನ್ನು ಆರಾಧಿಸಿ ಪಡೆಯುವ ಆಧ್ಯಾತ್ಮ ಮನುಷ್ಯನ ಉನ್ನತ ಸ್ಥಿತಿಗೆ ಏರಬೇಕೆಂಬ ಆಸೆಯಾಗಿದೆ. ಅದಕ್ಕೆ ವಿರುದ್ಧವಾಗಿದೆ ಸೈತಾನನ ಮಾರ್ಗ : ಪಾಶವೀ ವೃತ್ತಿಯನ್ನನುಸರಿಸುವ ಅಧಃಪತನದಲ್ಲಿ ಅವನಿಗುಂಟಾಗುವ ಆನಂದ ಈ ಅಧಃಪತನವನ್ನು ಹೆಂಗಸಿನ ಪ್ರೀತಿ; ನಾಯಿ, ಬೆಕ್ಕು ಮುಂತಾದ ಪ್ರಾಣಿಗಳ ಜೊತೆಯಲ್ಲಿ ಮಾಡುವ ಸಲಿಗೆಯ ಸಂಭಾಷಣವೆಂದು ವರ್ಣಿಸಬಹುದು....."[೮]

೭ The Intimate Journals of Charles Baudelaire (Boston : Beacon Press, 1957), p. 56

೮ Ibid. pp. 30 - 31
M. H. Abrams, Natural Supernaturalism (New York : W. W. Norton & Company, 1971), pp. 413 - 415

ಉನ್ಮಾದದ ಅಂಚಿನಲ್ಲಿ ನಿಂತ ಅವನ ಸಂವೇದನೆ – ಕಾವ್ಯ ನಿರ್ಮಾಣಕ್ಕೆ ಸಹಾಯಕವಾಯಿತೆಂಬುದನ್ನು ನಾವು ನೆನೆಯಬೇಕು. ಮನೋವೈಕಲ್ಯದಿಂದ ಉಂಟಾದ ಉನ್ಮಾದ, ಉದ್ವೇಗಗಳು ಕಾವ್ಯ ಮತ್ತು ಕಲೆಯ ಸ್ಫೂರ್ತಿಯ ಮೂಲವೆಂಬ ವಿಚಾರ ಬಹಳ ಕಾಲದಿಂದ ರೂಢಿಯಲ್ಲಿದೆ. ಈ ವಿಷಯದಲ್ಲಿ ಮನೋರೋಗಗಳ ಅಭ್ಯಾಸ ಉಪಯುಕ್ತವಾಯಿತೆಂಬುದರಲ್ಲಿ ಸಂಶಯವಿಲ್ಲ. ಉದ್‌ವಾಸ್ತವತೆ ಅವಲಂಬಿಸಿದ ವೈಜ್ಞಾನಿಕ ಪದ್ಧತಿಯ ಒಂದು ಅಂಗವಾಗಿ ಈ ಮತದೃಷ್ಟಿ ಬೆಳೆಯಿತು. ಉದ್‌ವಾಸ್ತವತೆಯ ಸಂಸ್ಥಾಪಕನಾದ ಬ್ರೆಟಾಂ (Breton) ಇವನು ವೈದ್ಯನಾಗಿದ್ದರಿಂದ ಉನ್ಮಾದ ರೋಗದ ಬಗ್ಗೆ ಹೆಚ್ಚು ಆಸಕ್ತಿಯನ್ನು ತೋರಿಸಿದನು. ಡಾ. ಚಾರ್ಕೋ (Charcot) ತನ್ನ ಪ್ರಯೋಗಶಾಲೆಯಲ್ಲಿ ಮಾಡಿದ ಮನೋವೈಕಲ್ಯದ ಅಭ್ಯಾಸವನ್ನು ಛಾಯಾಚಿತ್ರಗಳ ಜೊತೆಗೆ (Iconographie de la Salp'etrie're : ೧೮೭೫–೭೮) ಪ್ರಕಟಿಸಿದನು. ಈ ಪ್ರಕಟಣೆ ಉದ್‌ವಾಸ್ತವತೆಯ ಅನುಯಾಯಿಗಳ ಮೇಲೆ ಅತ್ಯಂತ ಆಳವಾದ ಪ್ರಭಾವವನ್ನು ಬೀರಿತು. ಈ ಅಭ್ಯಾಸದಲ್ಲಿ ಉನ್ಮಾದಿಗಳ ನಡೆವಳಿಕೆಯಲ್ಲಿಯೂ, ಕ್ರಿಶ್ಚನ್ ಅನುಭಾವಿಗಳಲ್ಲಿಯೂ ಸಾಮ್ಯವಿದೆಯೆಂಬುದನ್ನು ಸಿದ್ಧಗೊಳಿಸಲಾಯಿತು. ಕ್ರಿಶ್ಚನ್ ಅನುಭಾವಿಗಳು ತಮ್ಮ ಉನ್ಮಾದದ ಭರದಲ್ಲಿ ಶಿಲುಬೆಗೇರಿದ ಕ್ರಿಸ್ತನ ಮೈಮೇಲಿನ ಗಾಯಗಳನ್ನು ತಮ್ಮ ಶರೀರದ ಮೇಲೆಯೂ ಉದ್ಭವಿಸಿವೆಯೆಂಬುದನ್ನು (Stigmata) ತೋರಿಸುತ್ತಿದ್ದರು. ಇವುಗಳಿಗೂ ಮನೋರೋಗದ ಉದ್ವೇಗದ ಆಚರಣೆಯಲ್ಲಿಯೂ ಆಶ್ಚರ್ಯಕರವಾದ ಸಾಮ್ಯವಿದೆಯೆಂಬುದು ಕಂಡು ಬಂತು.

ಇವುಗಳ ಮೂಲಕವಾಗಿ ಉಂಟಾದ ತಿಳಿವಳಿಕೆಯ ಪರಿಣಾಮ ಮುಖ್ಯವಾಗಿ ಎರಡು :

೧) ಬುದ್ಧಿಯ ಪ್ರಭಾವವನ್ನು ಕಡಿಮೆ ಮಾಡಿ ತರ್ಕನಿಷ್ಠವಾದ ಭಾಷೆಯನ್ನು ಇಲ್ಲದಂತೆ ಮಾಡುವುದು ; ಇದೂ ಒಂದು ಕಾವ್ಯ ಸಾಧನೆ.

೨) ಇದು ಮಾಡುವ ನಾಶದ ಜೊತೆಗೆ ಖಂಡಿತವಾದ (positive) ಕೆಲವು ಮೂಲ್ಯಗಳನ್ನು ಅವಲಂಬಿಸುವುದರಿಂದ ಕಾವ್ಯ ನಿರ್ಮಿತಿಗೆ ಅವಶ್ಯಕವಾದ ಸಾಧನಸಾಮಗ್ರಿಯೂ ತಯಾರಾಯಿತು. ಅನುಭಾವಿಯ ದರ್ಶನಕ್ಕೆ (mystical experience) ಮೂರ್ತಸ್ವರೂಪವನ್ನು ಪ್ರತಿಮೆಗಳನ್ನು (concrete images) ಅನಾಯಾಸವಾಗಿ, ಯಾವುದೋ ಅನಾಕಲನೀಯವಾದ ಶಕ್ತಿಯಿಂದ ಪ್ರೇರಿತವಾಗುತ್ತವೆಯೆಂಬ ಮತ ಸ್ಪಷ್ಟವಾಯಿತು. ಬುದ್ಧಿಯ ಪ್ರಭಾವ ಕಡಿಮೆಯಾದ ಮೇಲೆ ಪ್ರತಿಭೆಯ (imagination) ಪ್ರಭಾವ ಬೆಳೆಯುತ್ತದೆ. ತರ್ಕನಿಷ್ಠೆಯನ್ನು ತೊರೆದುಬಿಟ್ಟ ಕಾರಣ ನಿಸರ್ಗದ ನಿಯಮ

ಬದ್ಧತೆಯನ್ನು ಕಾಲದ ಕ್ರಮಬದ್ಧತೆಯನ್ನು ತೊಡೆದು ಹಾಕಿ ಒಂದು ಸ್ವಪ್ನ ಲೋಕವನ್ನು ನಿರ್ಮಿಸಿ ಅದರಲ್ಲಿ ಮನಸ್ಸು ಸ್ವತಂತ್ರವಾಗಿ ಸ್ವಚ್ಛಂದದಿಂದ ವಿಹರಿಸಲು ಸಾಧ್ಯವಾಗುತ್ತದೆ. ಇದೇ ಮಾರ್ಗದಲ್ಲಿ ನಡೆದರೆ ನಮಗೆ ಆ ಅನಾಕಲನೀಯವಾದ ಅನಂತ ಶಕ್ತಿಯ ಸಾಕ್ಷಾತ್ಕಾರವಾಗುವ ಸಂಭವವಿದೆ. ಈ ದೃಷ್ಟಿಯಿಂದ ಬಾಡ್‌ಲೇಅರ್, ಮ್ಯಾಲಾರ್ಮೇ ಹಾಗೂ ರ್‍ಯಾಂಬೋ ಇವರ ಕಾವ್ಯದಲ್ಲಿಯೂ, ಅವರ ಜೀವನದಲ್ಲಿಯೂ ದಾರ್ಶನಿಕನ ಗುಣಗಳನ್ನು ಕಾಣಬಹುದೆಂದು ಅನೇಕ ವಿಮರ್ಶಕರ ಮತವಾಗಿದೆ.

ಕವಿಯು ಕಾವ್ಯದ ಸ್ವರೂಪ ಕಾಣುವ ಕಣ್ಣಿನಲ್ಲಿದೆಯೆಂಬ ಮಾತು ಸರ್ವಮಾನ್ಯವಾಗಿದೆ. ಆಂದ್ರೆ ಜೀದ (Andre' Gide) ಎಂಬ ನೋಬೆಲ್ ವಿಜೇತನಾದ ಫ್ರೆಂಚ ಲೇಖಕ ; ''Le po'ete est celui gul regarde'' ಯಾವನು ಚೆನ್ನಾಗಿ ನೋಡುತ್ತಾನೆಯೋ ಅವನೇ ಕವಿ! ಹೊರಗಿನ ವಸ್ತುಜಾತವೆಲ್ಲ ರೂಢಿಯ ಬಂಧನದಲ್ಲಿ ಸಿಕ್ಕು ಹಳಸಿ ಹೋಗಿ ಸಾರಹೀನವಾಗಿರುತ್ತದೆ ಈ ಬಂಧನದಿಂದ ಬಿಡಿಸಿ ಜಗತ್ತಿಗೆ ಹೊಸತನವನ್ನು ಕೊಡುವ ಶಕ್ತಿ ಕವಿಯ ಕಣ್ಣಿನಲ್ಲಿರುತ್ತದೆ. ಈ ಶಕ್ತಿ ಮಗುವಿನ ಶುದ್ಧ ಹಾಗು ನಿರಾಗಸ ದೃಷ್ಟಿಯಲ್ಲಿಯೂ ಕಾಣಬಹುದೆಂದು ಅನೇಕರು ಒತ್ತಿ ಹೇಳಿದ್ದಾರೆ. ಇದು ಮುಖ್ಯವಾಗಿ ರಮ್ಯ (Romantic) ಪರಂಪರೆಯಲ್ಲಿ ಬೆಳೆದ ಕವಿಗಳಿಗೆ ಮನದಟ್ಟಾದ ವಿಷಯ. ಅಮೇರಿಕೆಯ ಕವಿ ಎಮರ್ಸನ್ ಹೇಳುವ ಮಾತು ಇದು : "ಒಂದು ವಸ್ತುವಿನಲ್ಲಿ ದೇವದರ್ಶನವನ್ನು ಪಡೆಯಬಹುದು (epiphany).'' ಈ ಶಬ್ದ ಪ್ರಯೋಗ ೨೦ನೆಯ ಶತಮಾನದಲ್ಲಿ ಬಹಳ ಬಳಕೆಯಲ್ಲಿರುವುದನ್ನು ನಾವು ಕಂಡುಕೊಳ್ಳಬಹುದು. ಮುಖ್ಯವಾಗಿ ಜೇಮ್ಸ ಜಾಯಿಸನ ಲೇಖನದಲ್ಲಿ. ಈ ದಿವ್ಯದರ್ಶನ ಮಗುವಿನಂತಿರುವ ದೃಷ್ಟಿಗೆ ಸಾಧ್ಯವೆಂದು ಎಮರ್ಸನ್‌ನು ಸಾರಿದ್ದಾನೆ. "ಬಾಲಕನೆಂದರೆ ಜನರನ್ನು ಉದ್ಧರಿಸಲು ಬಂದ ಒಬ್ಬ ಉದ್ಧಾರಕ (Messiah), ಸ್ವರ್ಗದ ಅನುಭವವನ್ನು ದಯಪಾಲಿಸುವ ಯೋಗಿ." ಇಂಗ್ಲಂಡದ ಕೋಲರಿಜನೂ ಇದನ್ನೇ ತನ್ನ ಮಾತಿನಲ್ಲಿ ವಿವರಿಸುತ್ತಾನೆ: "ನಿಷ್ಪಾಪವಾದ ಪೂತ ದೃಷ್ಟಿಯನ್ನು ಉಳಿಸಿಕೊಂಡವನೇ ನಿಸರ್ಗದ ಸೌಂದರ್ಯವನ್ನು ಕಾಣಬಲ್ಲ. ಸಾಮಾನ್ಯವಾಗಿ ಕ್ಷುಲ್ಲಕವೆಂದೆಣಿಸಲ್ಪಟ್ಟ (Trivial) ವಸ್ತುಗಳಲ್ಲಿಯೂ ಅಗಾಧತೆಯನ್ನು ಕಾಣುವ ಸಾಮರ್ಥ್ಯ ಅಂಥ ದೃಷ್ಟಿಯಲ್ಲಿರುತ್ತದೆ. ನಿಜವಾಗಿಯೂ ನಿಸರ್ಗದಲ್ಲಿ ಉಚ್ಚನೀಚವೆಂಬ ಭೇದ ಭಾವವಿರುವುದಿಲ್ಲ ನಿಸರ್ಗದ ಈ ಸಮಭಾವವನ್ನು (equality) ಅನುಭವಿಸಬೇಕಾದರೆ ಮಗುವಾಗಬೇಕು. ರಮ್ಯಕವಿಗಳು ಈ ಮತಕ್ಕೆ ಪ್ರಮುಖ ಸ್ಥಾನವನ್ನು ಕಲ್ಪಿಸಿದರು. ಇದರಿಂದ ಮತ್ತು ಇನ್ನಿತರ ಕಾರಣಗಳಿಂದ ತಮ್ಮ ಯುಗಕ್ಕೆ ಅವರು ಕ್ರಾಂತಿಯುಗ (Age of Revolution) ವೆಂದು ಸಂಬೋಧಿಸಿದರು. ಇದಕ್ಕೆ "ನಿರಾಗಸ ದೃಷ್ಟಿಯ ಸೌಂದರ್ಯಶಾಸ್ತ್ರ"ವೆಂತಲೂ ಕರೆಯಬಹುದು.

ಬಾಡ್‌ಲೇಅರನು ಈ ವಿಚಾರಕ್ಕೆ ನವ್ಯತೆಯ ಉಡುಪನ್ನು ಕೊಟ್ಟನು. ಅವನ ದೃಷ್ಟಿಯಿಂದ ಪ್ರತಿಭಾಶಾಲಿ ಆದೇ ಗುಣವಾಖನಾಗಿರುವ ಮನೋರೋಗಿ ಯಾಗಿರುತ್ತಾನೆ (convalescent). ಈ ಪರಿಸ್ಥಿತಿಯಲ್ಲಿ ಅವನು ಬಾಲ್ಯಾವಸ್ಥೆಯನ್ನು ಪುನಃ ಅನುಭವಿಸುತ್ತಾನೆ ಅವನೊಬ್ಬ ವಯಸ್ಸಾದ ಬಾಲಕ (man-child); ಯಾಕೆಂದರೆ ಅವನು ವಯಸ್ಕನ ಕ್ಷಮತೆಯನ್ನೂ ಮಗುವಿನ ಶುದ್ಧ ಸಂವೇದನೆಯ ತೀವ್ರತೆಯನ್ನೂ (sharpened sensibility) ಪಡೆದಿರುತ್ತಾನೆ. ಬಾಲ್ಯಾವಸ್ಥೆಯ ಪುನಃ ಪ್ರಬೋಧಿಯೇ ಪ್ರತಿಭೆ. ಪ್ರತಿಭಾವಂತನು, ಮಗುವಿನಂತೆ. ಕ್ಷುದ್ರವಾದ ವಸ್ತುಜಾತವನ್ನೆಲ್ಲ ಹೊಸದಾಗಿ ಕಾಣುವಾಗ ಒಂದು ಭಾವಾವೇಶದಲ್ಲಿ ಮುಳುಗಿ ಹೋಗಿ ತನ್ನನ್ನು ತಾನೇ ಮರೆತು ಬಿಡುತ್ತಾನೆ. ಯಾವುದೋ ಒಂದು ಉನ್ನತವಾದ ಮನಃಸ್ಥಿತಿಯಲ್ಲಿ ಯಾವಾಗಲೂ ಅವ ಲೇರಿದವನಂತೆ ವರ್ತಿಸುತ್ತಾನೆ. ಇದೇ ಮಗುವಿನ-ಪ್ರತಿಭಾಶಾಲಿಯ-ಲಕ್ಷಣ ಬಾಡ್‌ಲೇಅರ್ ಹೇಳುವುದೇನಂದರೆ:

> "ಪ್ರತಿಭಾಶಾಲಿ ಪರಿಹಾರವಿಲ್ಲದ ಯಾವುದೋ ಮನೋರೋಗದಿಂದ ಯಾವಾಗಲೂ ಬಳಲುತ್ತಿರುತ್ತಾನೆ. ಸ್ಫೂರ್ತಿಯೆಂಬುದು ಮಿದುಳಿನ ಮೇಲೆ ಉಂಟಾದ ವಜ್ರಾಘಾತ (cerebral stroke)." ಜಗತ್ತು ಅತೀ ನವೀನವಾದ ಸೃಷ್ಟಿಯೆಂದು ತೋರಿಸುವ ದರ್ಶನಶಕ್ತಿ ಮಿತಿಮೀರಿದ ಅತಿಸೂಕ್ಷ್ಮವಾದ ಸಂವೇದನೆಯಲ್ಲಿರುತ್ತದೆ (hyperaesthesia). "ನಾನು ಧೈರ್ಯದಿಂದ ಇದಕ್ಕೂ ಮುಂದೆ ಹೋಗಿ ಘೋಷಿಸಬಲ್ಲೆ. ಮಿದುಳಿನ ಕಿಕ್ಕಿರಿದ ವಿಪರೀತ ರಕ್ತಸಂಚಯದ ಪರಿಣಾಮವಾಗಿಯೇ ಸ್ಫೂರ್ತಿಯ ಆವೇಶ ನಿರ್ಮಾಣವಾಗುತ್ತದೆ. ಪ್ರತಿಯೊಂದು ಉದಾತ್ತ ವಿಚಾರವೆಂದರೆ ನರಗಳ ಮೇಲೆ ಉಂಟಾದ ತೀಕ್ಷ್ಣವಾದ ಆಘಾತ ಮಿದುಳಿನಲ್ಲಿ ಏರಿಹೋಗುವ ಒಂದು ಪ್ರಕ್ರಿಯೆ." "ಕವಿಯೊಬ್ಬ ನಿರಂತರವಾಗಿ ಬಳಲುತ್ತಿರುವ ರುಗ್ಣ, ಅವನ ಜಗತ್ತು ಒಂದು ರುಗ್ಣಾಲಯ. ಈ ಆಸ್ಪತ್ರೆಯಲ್ಲಿ ತನ್ನ ಹಾಸಿಗೆಯನ್ನು ಬದಲು ಮಾಡಬೇಕೆಂಬ ಹವ್ಯಾಸವೇ ಅವನನ್ನು ಯಾವಾಗಲೂ ಕಾಡುತ್ತಿರುತ್ತದೆ."

ಮನೋರೋಗಕ್ಕೂ ಪ್ರತಿಭೆಗೂ ಇರುವ ನಿಕಟವಾದ ಸಂಬಂಧವನ್ನು ಕಂಡುಕೊಂಡ ಕವಿಗೆ ಮುಖ್ಯವಾದದ್ದು ಸಂವೇದನೆಯ ತೀಕ್ಷ್ಣತೆ, ಶುದ್ಧವಾದ ದೃಷ್ಟಿ. ಜಗತ್ತನ್ನು ಹೊಸದಾಗಿ ನೋಡುವ ಕಣ್ಣು, ಹೊಚ್ಚ ಹೊಸದಾದ ಇಂದ್ರಿಯಾನುಭವ — ಇಲ್ಲಿಯೇ ಸ್ಫೂರ್ತಿಯ ಚೈತನ್ಯಶಕ್ತಿಯಿದೆ. ಈ ಸಂದರ್ಭದಲ್ಲಿ ಪರಿಚಿತವಾದ ಸಂಸ್ಕೃತ ಉಕ್ತಿ "ಕವಯಃ ಕ್ರಾಂತದರ್ಶನಃ" ಎಂಬುದು ಸಮಯೋಚಿತವಾಗಿದೆ.

(ಮುಂದುವರಿಯುವದು : ಮುಂದಿನ ಭಾಗದಲ್ಲಿ ರ‍್ಯಾಂಬೋ, ಮ್ಯಾಲಾರ್ಮೆ, ಲಾಫೋರ್ಗ, ಜೆರಾರ್ಡದ ನರ್ವಾಲ-ಎಂಬ ಫ್ರೆಂಚ ಕವಿಗಳ ಬಗ್ಗೆ ಚರ್ಚೆ.)

೬೪ : ಸೃಜನವೇದಿ : ೧೫, ಎಪ್ರಿಲ್ ೧೯೮೪

ಸುಮತೀಂದ್ರ ನಾಡಿಗ

# ಐದು ಕವನಗಳು

## ೧. ಕಿಟಕಿ

ಕಣ್ಣ ಕಿಟಕಿಯ ನುಗ್ಗಿ ಎದೆಯ ದೋಚಿದೆ ನೀನು
ಈ ದರೋಡೆಗೆ ಎರಡು ಕಣ್ಣು ದಂಡ.
ನಿನ್ನ ಸಂಮೋಹಿನಿಗೆ ಮಂತ್ರಮುಗ್ಧನೆ ಆದೆ
ಬೇರೆ ಕಡೆ ಇರಬಹುದು ಬಹು ಪ್ರಚಂಡ.

ನಿನ್ನ ಕಣ್ಣಿನ ಒಳಗೆ ಕದ್ದು ಇಣುಕಿದೆನೊಮ್ಮೆ
ನನ್ನ ಹೃದಯದ ಕುನ್ನಿ ಎಲ್ಲಿ ಎಂದು
ಹೃದಯಗಳ ರಾಶಿಯಲಿ ಈ ಹೇಸಿ ಬಿದ್ದಿತ್ತು
ತನ್ನ ಅಸಹಾಯತೆಗೆ ತಾನೆ ನೊಂದು.

ಈಗ ಬಂದಿದೆ ಕುನ್ನಿ ಹಳೆಯ ವಾಸನೆ ಹಿಡಿದು
ಹೇಗೆ ತಪ್ಪಿಸಿಕೊಂಡು ಬಂತೊ ಕಾಣೆ.
ಇನ್ನೊಮ್ಮೆ ದೋಚಿದರೆ ನನ್ನ ಹೃದಯವ ನೀನು
ನಿನ್ನ ಕ್ಷಮಿಸುವುದಿಲ್ಲ, ತಿಳಿದುಕೋ ಜಾಣೆ.



## ೨. ಸಹದೇವ

ಬೆಚ್ಚದಿರು ಸಹದೇವ ಸರದಿ ಬಂದಿತು ಎಂದು
ನಂಬು ನುಗ್ಗುವ ಶಕ್ತಿ ರಕ್ತಕ್ಕಿದೆ.
ಕಡಲು ಹುಣ್ಣಿಮೆ ರಾತ್ರಿ ಉಕ್ಕುವುದು ಸಹಜ.

ಭಯವೂ ಸಹಜ. ಭಯ ಕಳೆದುಕೊಳ್ಳುವುದು
ತನ್ಮಯತೆ ಬಂದಾಗ ಬಹಳ ಸುಲಭ. ನಿನ್ನೊಳಗೆ
ಮುಳುಗಿರಬೇಡ ಸಹದೇವ. ನಿನ್ನ ಆಚೆಗೆ ಒಮ್ಮೆ ಜಿಗಿದು ನೋಡು.

ಕೈ ಹಿಸಿಕಿಕೊಳ್ಳುತ್ತ ಮುಷ್ಟಿ ಬಿಗಿಹಿಡಿಯುತ್ತ
ಒಳಕ್ಕೆ ತಿರುಗಿಸಬೇಡ ನಿನ್ನ ದೃಷ್ಟಿ. ಕೈಚಾಚು
ಚಾಚಿಕೊಳ್ಳುವ ಹಾಗೆ, ಬೆಚ್ಚಗಾಗುವುದೇನು ಕಷ್ಟವಲ್ಲ.

ಭಯದ ಚಳಿ ಹಿಡಿದಂತೆ ನಡುಗುತ್ತ ನಿಂತಿರಬೇಡ.
ಗಾಳಿ ಬಂದಾಗಲೆ ಸಹದೇವ, ತೂರಿಕೊ.
ಬೆಂಕಿ ಬಂದಿರುವಾಗ ಮೈಕಾಸಿಕೊ.



## ೩. ಯಾರೆ, ನೀನಾರೆ ?

ಧುಮುಧುಮು ಧುಮುಧುಮು ಉರಿಯುವ ಹೆಣ್ಣೆ
ಅತೃಪ್ತಿಚೆಲ್ಲುವ ಜ್ವಾಲಾಮುಖಿಯೇ,
ಸಿಡಿಲಾಗೆರಗುವ ವಿದ್ಯುತ್ತೇ,
ಮನೆಗಳ ಕೆಡಹುವ ಭೂಕಂಪನವೆ
ಯಾರೆ, ನೀನಾರೆ ?

ಅನಾವೃಷ್ಟಿಸಖಿ ಬಿಸಿಲಿನ ಝಳವೆ
ಅತಿವೃಷ್ಟಿಸಖಿ ಉಕ್ಕುವ ಹೊಳೆಯೆ
ಪ್ರಳಯದ ಬೆಂಕಿಯು ಮಳೆಯೆ
ಬಡಬಾಗ್ನಿಯು ಸುಳಿಯೇ ?
ಯಾರೆ, ನೀನಾರೆ ?

ತೂಫಾನಿನ ತಾಂಡವವೆ ?
ಕಡಲಾಳದ ಕುದಿನೀರಿನ ನದಿಯೆ ?
ಮರುಭೂಮಿಯು ಮರಳಿನ ಸುಳಿಯೆ ?
ಉಲ್ಕಾಪಾತವೆ ? ಧೂಮಕೇತುವೆ ?
ವಿನಾಶಕಾಲದ ವಧುವೇ ?
ಯಾರೆ, ನೀನಾರೆ ?

ಕಾಲನ ಪಾಶವೊ. ನರಕದ ಉರಿಯೊ ?
ಶೂಲವೊ, ಗಲ್ಲೊ, ವಿಷವೊ, ನೇಣೋ ?
ಕಾಳಿಯೊ, ದುರ್ಗೆಯೊ, ಮೃತ್ಯುದೇವತೆಯೊ ?
ಯಾರೆ, ನೀನಾರೆ ?

## ೪. ಏನಾಗಿದೆ ನಿನಗೆ ?

ಹಳದಿ ಕೆಂಪು ಸೇರಿದಂಥ ದಾಸವಾಳ ಹೂವ ಕಂಡು
ಕೃತಜ್ಞತೆಯ ಹೇಳುವವನೆ,
ಗಾಳಿಯಲ್ಲಿ ತೂಗುತಿರುವ ಮರಗಿಡಗಳ ನೋಡುತ್ತಲೆ
ನಿನ್ನನ್ನೇ ಕರೆದವೆಂದು ಮಾತಿಗಿಳಿಯುವವನೆ,
ಏನಾಗಿದೆ ನಿನಗೆ ?

ವೃತ್ತಕೆಳೆದ ತ್ರಿಜ್ಯಗಳೊ ಎನ್ನುವಂತೆ ಗರಿಯ ಕಂಡು
ತೆಂಗಿನತಲೆ ಸುತ್ತಲೂ ವೃತ್ತ ಕಾಣುವವನೆ,
ಗಿಡಗಿಡಕ್ಕು ನಿನ್ನ ಕಂಡು ಪ್ರೀತಿ ಉಕ್ಕಿತೆನುವ ಹಾಗೆ
ಎಲೆಯ ಕೆನ್ನೆ ಸವರುವವನೆ, ಹೃದಯ ತುಂಬಿ ನಿಲ್ಲುವವನೆ,
ಏನಾಗಿದೆ ನಿನಗೆ ?

ಕಂಬಳಿಹುಳ ಇರುವೆ ಜಿರಲೆ ಸೊಳ್ಳೆ ಕೂಡ ನರಳದಿರಲಿ
ಎಂದು ಬಯಸುವವನೆ,
ರಾಮಕೃಷ್ಣ ಪರಮಹಂಸ ಸಮಾಧಿಯಲ್ಲಿ ನಿಂತ ಹಾಗೆ
ಕನಸಿನಲ್ಲಿ ನಿಂತವನೆ,
ಏನಾಗಿದೆ ನಿನಗೆ ?

ಅವಮಾನದ ಜೊತೆಗೆ ಅನ್ನ ಕಷ್ಟದಿಂದ ನುಂಗುವವರ
ಗಂಟಲುಬ್ಬು ಇಳಿವ ಕಂಡು,
ಹಸುಮಕ್ಕಳ ತೊದಲು ಕಂಡು, ಎಲ್ಲ ಲೀಲೆ ಅಂದವನೆ
ಏನಾಗಿದೆ ನಿನಗೆ ?



## ೫. ಒಗಟಿನ ಲಾವಣಿ ಪದ

ಸೂರ್ಯನ ಸುತ್ತಲು ಸುತ್ತುವ ಭೂಮಿಯ ಸವಾರಿಮಾಡುವ ಭೂಮಿಯ ಮಕ್ಕಳೆ
ಭೂಮಿ ತಿರುಗುವುದ ಕಂಡಿದ್ದೀರಾ ?
ಕಾಲಪಕ್ಷಿಗೆ ಬಣ್ಣಗಳೆಷ್ಟು ಕಾಲಬ್ರಹ್ಮನ ಮೊಟ್ಟೆಗಳೆಷ್ಟು ಎಣಿಸಿದ್ದೀರಾ ?
ಬಲ್ಲವರಿದ್ದರೆ ಕೇಳುವೆನು, ತಿಳಿದಷ್ಟನ್ನೆ ಹಾಡುವೆನು.

ಸೃಜನವೇದಿ ; ೧೫, ಏಪ್ರಿಲ್ ೧೯೮೪ : ೬೭

ನಾವೂ ನೀವೂ ಕಾಲದ ಮೊಟ್ಟೆ, ಕೊನೆಗೆ ಸೇರುವೆವು ಕಾಲದ ಹೊಟ್ಟೆ
ಕಾಲಪಕ್ಷಿಯು ನೋಡಿದಿರಾ ? ರೆಕ್ಕೆಯು ಫಡಫಡ ಕೇಳಿದಿರಾ ?
ಸೂರ್ಯದೇವನೂ ಕಾಲದ ಮೊಟ್ಟೆ, ನೀಹಾರಿಕೆಯೂ ಕಾಲದ ಮೊಟ್ಟೆ
ಇಂಥವು ಎಷ್ಟಿವೆ ಗೊತ್ತೇ ನಮಗೆ ಎಣಿಸಲು ಪುರುಸೊತ್ತಿಲ್ಲದೆ ನಮಗೆ.
ಬಲ್ಲವರಿದ್ದರೆ ಕೇಳುವೆನು, ತಿಳಿದಷ್ಟನ್ನೆ ಹಾಡುವೆನು.

ಭೂಮಿ ತಿರುಗುವಳು ನಮ್ಮನು ಹೊತ್ತು ಎಷ್ಟು ದಿನವೊ ನಮಗ್ಯಾರಿಗೆ ಗೊತ್ತು
ಎಂದಾಗುವಳೊ ಕಾಲದ ತುತ್ತು.
ಬಾಣದ ನೇರವೆ ಕಾಲನ ಹಾದಿ, ವೃತ್ತಾಕಾರವೆ ? ಎಲ್ಲಿದೆ ಆದಿ,
ಕಾಲನು ಹಾವೊ ಕಾಲನು ಪಕ್ಷಿಯೊ ಬಿಚ್ಚಿರೊ ಯಾದಿ.
ಬಲ್ಲವರಿದ್ದರೆ ಕೇಳುವೆನು, ತಿಳಿದಷ್ಟನ್ನೆ ಹಾಡುವೆನು.

ಭೂಮಿಯು ಕೂಡ ಕಾಲನ ಮೊಟ್ಟೆ ಬ್ರಹ್ಮಾಂಡಗಳೂ ಕಾಲನ ಮೊಟ್ಟೆ
ತಿಂದೇ ತಿನ್ನುವ ತನ್ನದೆ ಮೊಟ್ಟೆ ಎಷ್ಟು ತುಂಬಿದೆಯೊ ಕಾಲನ ಹೊಟ್ಟೆ !
ಆವನೇ ಯಮನೊ ಪರಮೇಶ್ವರನೊ ಭೋಗಿಶಯನನೊ ಆದಿಶೇಷನೊ,
ಅಂತಕನೊ ಹಿತಚಿಂತಕನೊ ? ಕಾಳಿಯೊ ದುರ್ಗಿಯೊ, ಗಂಡೊ ಹೆಣ್ಣೊ,
ಬಲ್ಲವರಿದ್ದರೆ ಕೇಳುವೆನು, ತಿಳಿದಷ್ಟನ್ನೆ ಹಾಡುವೆನು.

ಮೊಟ್ಟೆಗಳೊಡೆದು ಹೊರಬಂದವರು, ಮೊಟ್ಟೆಗೇನ್ನೆ ತಿನ್ನುವ ಜನರು
ಕಾಲದ ಲಕ್ಷಣ ಗುರ್ತಿಸಿರೊ.
ಭಾಷೆಯು ಅದನ್ನೆ ಹುಡುಕುತ್ತಿಹುದು, ಕಲ್ಪನೆ ಅದನ್ನೆ ತಡಕುತ್ತಿಹುದು
ಕಾಲನ ಮಹಿಮೆಯ ಕೀರ್ತಿಸಿರೊ, ಮನಬಂದಂತೆ ಮೂರ್ತಿಸಿರೊ.

ಕಾಲನ ಬಾಯಲಿ ಕಾಲನ ಬಾಲ
ಆತನೆ ಬಲ್ಲ ಆತನ ಜಾಲ – ಅಲ್ಲವೇನರೋ ಅಣ್ಣಗಳಿ
ನಮ್ಮ ಅನುಭವದ ಕಣ್ಣುಗಳಿ,
ಬಲ್ಲವರಿದ್ದರೆ ಕೇಳುವೆನು, ತಿಳಿದಷ್ಟನ್ನೆ ಹಾಡುವೆನು.



ಜಿ. ಎಂ. ಕುಲಕರ್ಣಿ

---

## ಎಂಟು ಕವನಗಳು

### ೧. ನೆಹರೂ ಕಂಡ ಭಾರತ : ಗೆಳೆಯನಿಗೆ ಒಂದು ಪತ್ರ

ಹತ್ತೊಂಬತ್ತನೂರ ಅರವತ್ನಾಲ್ಕರ
ಮೇ ಇಪ್ಪತ್ತೇಳು
ಉರಿ ಬಿಸಿಲು ಕಾದ ಮಧ್ಯಾಹ್ನ
ನಮ್ಮೂರ ಪತ್ರಿಕೆ ತುಂಬ
ಹರಿದಿದ್ದ
ನೆಹರೂ
ಸತ್ತ ಸುದ್ದಿ.

ಗೆಳೆಯ, ನೆಹರೂ
ಈಗ ಇದ್ದಿದ್ದರೆ ಬಿತ್ತಬಹುದಿತ್ತು
ಮಾನವೀಯತೆಯ ಬೀಜ
ಬೆಳೆಯಬಹುದಿತ್ತು ಕ್ರೌರ್ಯ
ಹೊದ್ದಿರುವ ಈ
ಭೂಮಿಯಲಿ
ಮನುಷ್ಯತ್ವದ ಬೆಳೆಯ.

ಈಗ ಗೆಳೆಯಾ,
ನೆಹರೂ ಕಂಡ ಭಾರತದ ಬಗೆಗೆ ಕವನ
ಬರೆಯಬೇಕೆಂದರೆ
ಮನದ ಮರೆಯಲ್ಲಿ
ಅಡಗಿರುವ ಶಾಂತಿ, ದಯೆ ಇತ್ಯಾದಿ
ಪದಗಳ ಹೊರಗೆಳೆಯಬೇಕು.

ಸೃಜನವೇದಿ : ೧೫, ಎಪ್ರಿಲ್ ೧೯೮೮ ; ೬೯

ಕೊಳಗೇರಿಯ ಬದುಕಿನತ್ತ
ಕಣ್ಣು ಹಾಯಿಸಬೇಕು ನಾವು.

ಉಣ್ಣಲು ತುತ್ತನ್ನವಿಲ್ಲದ
ಉಡಲು ತುಂಡು ಬಟ್ಟೆಯಿಲ್ಲದ
ಮಲಗಲು ಒಂದಿಂಚು ಜಾಗವಿಲ್ಲದ
ಪರದಾಡುತ್ತಿರುವ ಈ
ಜಿಪ್ಸಿಗಳು; ಕಾರ್ಮಿಕರು
ಉದ್ಯೋಗರಹಿತರು, ರೈತರು
ವರ್ತಮಾನದ ನೆರೆಯಲ್ಲಿ
ಕನಲುತ್ತ ಕನವರಿಸುತ್ತ
ತಮ್ಮ ಜೀವನದ
ಒಂದೊಂದು ಕರಾಳ ರಾತ್ರಿ
ನೂಕುವರು ನಿಟ್ಟುಸಿರಿನೊಂದಿಗೆ.

ಪ್ರಿಯ ಮಿತ್ರ
ನಿರ್ಜನ ರಾತ್ರಿಗಳ ನಡುವೆ
ಏಕಾಂಗಿ ಕುಳಿತಾಗ
ಒತ್ತೊತ್ತಿ ಬರುವ ನೆನಪುಗಳ ಹಾಗೆ
ಇಂಥ ಚಿತ್ರಗಳು
ನೆಹರೂ ಹೃದಯವನು ಕಲಕಿದವು
ಮುತ್ತಿದವು ಆತನನು
ಡಿಸೆಂಬರಿನ ಚಳಿಯಂತೆ
ಆತನಲಿ ಅನುಕಂಪದಲೆಗಳನು ತರಿಸಿದವು.
ಆಗ
ನೆಹರೂ ಬಯಸಿದ್ದ ಭಾರತದಿ
ಅನ್ಯಾಯ – ಶೋಷಣೆಯ
ಬಡತನದ ಅಜ್ಞಾನಾಂಧಕಾರದ ಕಾಲ
ಕಳೆದು
ಸಮೃದ್ಧ ಸುಗ್ಗಿ
ರಾಶಿ ರಾಶಿಯಾಗಿ ಪಸರಿಸಬೇಕೆಂದು
ಕಾರ್ಮಿಕರ ಕಣ್ಣಂಚಿನಲಿ ಹೊಂಗನಸು
ಮೂಡಬೇಕೆಂದು

ಅಚಲ ನಿಂತಿರುವ
ನಕ್ಷತ್ರ ಕಟ್ಟಿಕೊಂಡು ನಗುತಿರುವ ಚಂದ್ರನನು.
ಆದಕಾಗಿ ಸ್ನೇಹಿತನೆ
ನೆಹರೂ ತನ್ನ ಕನಸ ಭಾರತದಲ್ಲಿ
ನಮಗೆಲ್ಲ ಕೊಟ್ಟ
ರೊಟ್ಟಿ
ನಿರೀಕ್ಷೆ
ಬಯಕೆ
ಊರುಊರಲ್ಲಿ ಬೆಳೆದ
ಕೈಗಾರಿಕೆ.
ರೈತರ ಮುಖದಲ್ಲಿ ಕೊರೆದ
ಹಸಿರು ಕ್ರಾಂತಿಯು ಚಿತ್ರ
ಆದರೆ ಗೆಳೆಯ
ಹೊಂಟಿದ್ದ ಗಾಡಿ
ಎಲ್ಲಿ ಹಳಿ ತಪ್ಪಿತೋ ?
ನಮ್ಮ ಬಯಕೆಗಳು
ಚಿಗುರಿ ಹಣ್ಣಾಗಲಿಲ್ಲ.
ನೆಹರೂ ನೀರೆರೆದ
ಬಂಡವಾಳಶಾಹಿಯು ಸಸಿ
ಹೆಮ್ಮರವಾಗಿ ಬೆಳೆದು
ವಿಶ್ವರೂಪವ ತಾಳಿ
ದಿಕ್ಕು ದಿಕ್ಕಿಗೂ ತನ್ನ
ಬಾಹುಗಳ ಚಾಚಿ ರಾಚಿತು ಬೆಂಕಿ.
ಪ್ರಜ್ವಲಿಸಿದಾ ಬೆಂಕಿಗೆ
ಕಾರ್ಮಿಕರ ಬಯಕೆಗಳು
ರೈತರ ಬೆವರ ಹನಿಗಳು
ಉರಿಉರಿದು ಬತ್ತಿದವು.
ಆದಕ್ಕೆಂದೇ ಹೇಳಿದೆ ಮಿತ್ರಾ
ಈಗ ಇದ್ದಿದ್ದರೆ ನೆಹರೂ ಬಿತ್ತಬಹುದಿತ್ತು
ಮಾನವೀಯತೆಯ ಬೀಜ
ಬೆಳೆಯಬಹುದಿತ್ತು ಕ್ರೌರ್ಯ
ಹೊದ್ದಿರುವ ಈ

ಭೂಮಿಯಲಿ
ಮನುಷ್ಯತ್ವದ ಬೆಳೆಯು.

ಗೆಳೆಯಾ
ಸಧ್ಯ ಈಗ
ಬದುಕಿರುವ ಜೀವಗಳು
ತಲ್ಲಣಿಸುವದ ನೋಡು
ಹಳಿತಪ್ಪಿದ ಗಾಡಿಯಲಿ
ಆಗುತಿರುವ
ಸಾವು-ನೋವು ಅತ್ಯಾಚಾರ ಕೊಲೆ ನೋಡು
ಕಂದಮ್ಮಗಳ ಚೀತ್ಕಾರ
ಅಬಲೆಯರ ರೋದನ ಕೇಳು
ಅದಕಾಗಿ ಗೆಳೆಯ
ನೆಹರೂ ಕಂಡ ಭಾರತದ
ಕಲ್ಪನೆಗೆ ಸರಿಯಾದ ರೂಪ
ಕೊಟ್ಟು ಕಟೆಯುವ ಶಿಲ್ಪಿ
ಈಗ ತುರ್ತಾಗಿ ಮೂಡಿ
ಬರಬೇಕು.
ಭಾರತ ಅದಕ್ಕಾಗಿ
ಇನ್ನೆಷ್ಟು ಕಾಲ
ಕಾಯಬೇಕು !....?



## ೨. ಒಬ್ಬ ಮನುಷ್ಯನಿಗೆ

ಪ್ರಿಯ ಗೆಳೆಯಾ
ನಿನ್ನ ಕಂಡಾಗ
ಕಪ್ಪು ಇತಿಹಾಸದ
ಕರಾಳ ಅಧ್ಯಾಯಗಳು ಮತ್ತೆ
ಮನದಲ್ಲಿ ತೆರೆದುಕೊಳ್ಳುತ್ತವೆ.

ಕೀವು ನೆತ್ತರದ ಕೋಟೆ
ಒಡೆದು ಹರಿದು ಬಂದ

ಶ್ರಮದ ಹನಿ
ನಮ್ಮ ವೈಭೋಗದ ಸದ್ದಿನಲ್ಲಿ
ನಿನ್ನ ನೋವಿನ ಬಿಕ್ಕಿನಲ್ಲಿ
ಅಡಗುತ್ತದೆ.

ಮುಂದೊಂದು ದಿನ
ಶತಶತಮಾನಗಳ ದಾಸ್ಯದಲಿ
ಹೂತು ಹೋದ ನೊಂದವರ
ಚೆಂದ ಬಯಕೆಗಳು
ಸುಂದರ ಜೀವನದ ಕನಸು
ಕಂಡ ಕವನ ಬರೆಯುತ್ತವೆ.
ಪ್ರತಿಘಟನೆಯು ಧ್ವನಿಯೊಡನೆ ಸಿಡಿಯುತ್ತವೆ.
ಎಚ್ಚರದ ಎಮುಕಿನಲ್ಲಿ ಹೊಳೆಯುತ್ತವೆ.



## ೩. ನಮ್ಮೂರ ಹುಡುಗಿಯರ ವರ್ತಮಾನದ ಹಾಡು

ನಮ್ಮಾಸೆಗಳ ಮೇಲೆಲ್ಲ
ನಗು ಚೆಲ್ಲುವ ಹುಡುಗಿಯರ
ನಿಸ್ಸಹಾಯಕತೆಯ ನಿಟ್ಟುಸಿರುಗಳು
ಇಲ್ಲಿಯ ಬರ್ಬರ ಸಂಪ್ರದಾಯದ ಕೋಟೆಯಲಿ
ಉಸಿರಾಡದೆ; ಧ್ವನಿ ಎತ್ತದೆ
ಸೊರಗುತ್ತ ಸವಕಲಾಗಿ
ಬೀದಿಯ ತುಂಬ ಹರಡಿಕೊಂಡು
ಇರುಳಿನ ನಿದ್ದೆಯಂತೆ
ಬತ್ತಲಾಗಿ ಬಿದ್ದಿವೆ.

ಇದನ್ನು ಕಂಡ
ನಮ್ಮೂರ ಹುಡುಗರು
ನೀಟಾಗಿ ಘಾಟಾಗಿ
ಬೀದಿ ಬೀದಿಗಳಲಿ ಹುಡುಗಿಯರ
ಲೈನು ಹೊಡೆಯುತ್ತ

ರೇಪು ಮಾಡುತ್ತ
ಅವರ ತಾರುಣ್ಯವನ್ನು
ಇಂಚಿಂಚಾಗಿ ಕಬಳಿಸುತ್ತ
ಕೊಬ್ಬಿದ ಗೂಳಿಯಂತೆ ಬೀಗುತ್ತಿದ್ದಾರೆ
ಗಂಡಸ್ತನದ ವಂಶಪಾರಂಪರ್ಯ ಆಳ್ವಿಕೆಗೆ
ಸಂಕೇತವಾಗಿ ನಿಂತಿದ್ದಾರೆ.

ಕ್ರಾಂತಿಯ ಹೊಂಗನಸುಗಳ
ಬಣ್ಣಬಣ್ಣದ ಕನಸುಗಳ
ಕಾಣುವವರೇ ಬನ್ನಿ.
ತೆರೆದಿಟ್ಟ ನಮ್ಮೂರ ಯುವತಿಯರ
ಶೋಷಣೆಯ ಬದುಕನ್ನು ಕಾಣೆ
ನೊಂದವರ ಬೆಂದವರ
ನೋವನ್ನು ಕೇಳಿ
ದಯವಿಟ್ಟು ಮಾತುಬಿಟ್ಟು
ಅಬಲೆಯರು ಬದುಕಲು
ಬಾಯನ್ನು ಕೊಡಿ
ಉಸಿರಾಡಲು ಗಾಳಿ ಕೊಡಿ.



## ೪. ನೆನಪು

ನಾ ನಡೆವ ಹಾದಿಯಲ್ಲಿ
ದಾರಿಯುದ್ದಕ್ಕೂ ನಿಟ್ಟುಸಿರಿನೊಂದಿಗೆ
ಕಾಲವನ್ನು ತಳ್ಳುತ್ತ
ನಿಂತಿರುವ ಈ
ಬೋಳು ಮರವನ್ನು ನೋಡಿದಾಗ
ಕುಂಕುಮ ಅಳಿಸಿ
ಬಳೆಗಳನ್ನು ಒಡೆದುಕೊಂಡು
ವಸಂತದ ನಡುವೆ
ಶೋಕ ಗೀತೆಯ ನುಡಿಸುತ್ತ

ಸಮಾಜದ ಭ್ರಷ್ಟ ವ್ಯವಸ್ಥೆಗೆ
ಕನ್ನಡಿ ಹಿಡಿದಿರುವ ಗೆಳತಿ
ನನಗೆ ನಿನ್ನ ನೆನಪಾಗುತ್ತದೆ.



## ೫. ದೀಪಾವಳಿ : ೧೯೮೨

ಎಲ್ಲೆಲ್ಲೂ ದಾಸ್ಯಭಾವ
ಮೊಳೆತು, ಕೊಳೆತು
ನೆಲ, ಜಲ, ಗುಡ್ಡ, ಬೆಟ್ಟ ಅಲೆಯುತ
ಬೆಳಕಿಗಾಗಿ ಬಂಧುಗಳು
ಬೆರಗಿನಿಂದ ಕಾಯುತಿರಲು
ಬಂತು ದೀಪಾವಳಿ

ಅವರನ್ನು ಇವರು ಬಡಿದು
ಇವರನ್ನು ಅವರು ಕಡಿದು
ಬಡಜನತೆಯ ಹೃದಯದಿಂದ
ಭೇದಿಸುವ ಒಂದೊಂದು ನೋವು
ಆರ್ತನಾದದಂತೆ ಮೊಳಗುತಿರಲು
ಅವರ ನೋವುಗಳ ಮೇಲೆ
ವರ್ತಕರ ನಗೆಯು ಅರಳುತಿರಲು
ಬಂತು ದೀಪಾವಳಿ.

ಒಂದೆಡೆ ಪ್ರವಾಹ ಉಕ್ಕಿ
ಇನ್ನೊಂದೆಡೆ ಬರಗಾಲ ಬಿಕ್ಕಿ
ನೊಂದವರ ಪ್ರಾಣ
ಪಟಪಟನೆ ಸಿಡಿದು
ಘನ ಸರ್ಕಾರದ ಸಹಾಯ ಧನಕಾಗಿ
ಬಾಯಿ ಬಾಯಿ ಬಿಡುತಿರಲು ಜನರು
ಬಂತು ದೀಪಾವಳಿ.

ಹಕ್ಕಿಗಳ ರೆಕ್ಕೆ ಮುರಿದು
ಮಾತಿಗೊಂದು ಲಾಠಿ

ಏಟು ತಿಂದು
ಥರಥರನೆ ನಡುಗುತಿರಲು
ಬಂತು ದೀಪಾವಳಿ.

ಕಾಡಲೆಲ್ಲ ಊರು ತಳೆದು
ಊರಲೆಲ್ಲ ಕಾಡು ಬೆಳೆದು
ಮನುಷ್ಯರೆಲ್ಲ ಮೃಗಗಳಾಗಿ
ಮೃಗಗಳೆಲ್ಲ ಮನುಷ್ಯರಾಗಿ
ಕೃಷ್ಣೆಯರೆಲ್ಲ ಕೃಷ್ಣಗಾಗಿ
ತಹತಹಿಸುತ ಕಾಯುತಿರಲು
ಬಂತು ದೀಪಾವಳಿ.



## ೬. ಬೇಕು ನಮ್ಮೂರಿಗೆ ಒಂದು ಒಳಚರಂಡಿ

"ನಿಮ್ಮೂರಿಗೆ ಚರಂಡಿಗಳು ಬೇಕೋ?
ಅಥವಾ ಒಳಚರಂಡಿಗಳು ಬೇಕೋ?"
ಎಂದು ನಮ್ಮೂರ ಜನರನ್ನು ಕೇಳಿದರೆ
'ನಮಗೆ ಒಳಚರಂಡಿಗಳೇ ಬೇಕು'
ಎನ್ನುವವರು ಈ ಜನ.

ಪೇಟೆಯಲ್ಲಿ ನಿಂತು ಬತ್ತಲಾಗಲು
ಯಾರು ಇಷ್ಟ ಪಡುತ್ತಾರೆ ಹೇಳಿ!

ನಿಮ್ಮ ತಿರಸ್ಕೃತ ಕಾದಂಬರಿಗಳು,
ಕಥೆಗಳು; ಕವನಗಳು
ಗೀಚಿ ಗೀಚಿ ಒಗೆದ ಪ್ರೇಮಪತ್ರಗಳು
ಒಡೆದು ಹಾಕುವ ವಿಸ್ಕಿ ಬಾಟಲಿಯ ಚೂರುಗಳು
ದಿನ ನಿತ್ಯ ಮಾಡುವ ಭ್ರೂಣ ಹತ್ಯೆಗಳು
ಎಲ್ಲವೂ ಒಳಚರಂಡಿಯಲ್ಲಿಯೇ
ತೇಲಿ ಹೋಗಬೇಕೆಂದು ನಮಗೆ
ಏಕೆ ಅಷ್ಟು ಬಯಕೆ!
ಅಷ್ಟೂ ಧೈರ್ಯವಿಲ್ಲದ ನೀವೆಂದು

ಈ ದೇಶದಲ್ಲಿ ಜೀವಿಸಬೇಕು
ಅಷ್ಟನ್ನೂ ದಕ್ಕಿಸಿಕೊಳ್ಳಲಾರದ ನೀವು
ಹೇಗೆ ದೊಡ್ಡ ಮನುಷ್ಯರಾಗಬೇಕು !

ನೋಡಿ
ನೀವು ಏನೇ ಮಾಡಿ
ನಮ್ಮೂರ ಒಳಚರಂಡಿಯು
ವಿಷಯಗಳನ್ನು ಸಂಗ್ರಹಿಸಿ
ಹೊರಗೆಲ್ಲ ಹಂಚುವ ನಾವು
ಶತಶತಮಾನದ ಜೀತದ ಬದುಕಿಗೆ
ವ್ಯಯ ತೆತ್ತವರು, ಈಗ
ಭವ್ಯ ಭವಿಷ್ಯತ್ತಿನ
ಬೆಳಕಿಗಾಗಿ ಎಚ್ಚತ್ತು ಕೊಂಡವರು
ನಿಮ್ಮೂರಲ್ಲಿಯೇ ಇದ್ದೇವೆ
ನಿಮ್ಮನ್ನು ಹುಡುಕುತ್ತಲಿದ್ದೇವೆ.

●

## ೭. ಬೆಂಗಳೂರಲ್ಲಿ ಸಂಜೆ

ಇಲ್ಲಿ
ಈ ಬೆಂಗಳೂರಲ್ಲಿ
ದಿನವೆಂಬ ಹುಡುಗಿ
ಸಂಜೆಯ ಸ್ಕರ್ಟನ್ನು
ತೊಟ್ಟು ಬಂದಾಗ
ಸ್ಕರ್ಟನ್ನು ಕಳಚಿ
ಆಕೆಯ ಪ್ರಾಯದಲ್ಲಿ
ತಮ್ಮ ಗಂಡಸ್ತನ ಮೆರೆಸುವ
ಆಸೆಯಿಂದ ಇಲ್ಲಿ
ಯ ಜನರ
ನೆತ್ತರು ಬೆಚ್ಚಗಾಗುತ್ತದೆ
ಬದುಕು ಬಿಚ್ಚಿಕೊಳ್ಳುತ್ತದೆ.

●

## ೮. ಜೀರೋ

ಮಬ್ಬುಗತ್ತಲಿನ ಇಲ್ಲಿ
ಎಲ್ಲವೂ ಮಿಣುಕುದೀಪ
ಯಾಂತ್ರಿಕತೆಯನು ಮೈ ಒತ್ತಿ
ಬಂದಿರುವ ಹಕ್ಕಿಗಳು
ದಿನದಿಂದ ದಿನಕ್ಕೆ ಬದಲಾಯಿಸುತ್ತ
ಹೋಗುತ್ತಿರುವ ಪ್ರವಾಹಗಳು.
ಕಿತ್ತಿದ್ದನ್ನೇ ಅಂಟಿಸುವ
ಅಂಟಿದ್ದನ್ನು ಮತ್ತೆ ಕಿತ್ತಿಸುವ
ಅಂತೆ ಕಂತೆಗಳಲ್ಲಿ ಮುಳುಗಿರುವ
ನಿಸ್ಸಾರ ಬದುಕಿನ ನೋಟಗಳು
ಒಡೆದ ಕನ್ನಡಿಯ ಚೂರುಗಳು.

ಇದರ ಮೇಲೆ
ಪ್ರಭುತ್ವ ಸ್ಥಾಪಿಸುವೆವೆಂದು
ಹೆಮ್ಮೆಯಿಂದ ಬೀಗುತ್ತಿರುವ
ಮೃಗಗಳ ವಿಕಟ ಹಾಸದ ನಗೆ.

ಈ ಎಲ್ಲದರ ನಡುವೆ
ಎಣೆ ಇಲ್ಲದ ಹುರುಳಿಲ್ಲದ
ಘೋಷಣೆಗಳ ಕೂಗಾಟ
ಬದುಕಿನ ಪ್ರವಾಹದ ಜತೆ
ಸಾಗುವ ಜಗ್ಗಾಟ
ಆದರೆ ಎಷ್ಟು
ದಿವ ನಡೆದೀತು ಈ ಗುದ್ದಾಟ ?

●

## ಸೃಜನವೇದಿ - ೧ ರ ಲೇಖಕರು

ವಿ. ಜಿ. ಭಟ್ಟ
C/o. ಡಾ. ಎಚ್. ಬಿ. ಕುಲಕರ್ಣಿ
೪೦೨, 'ರಿವೀರಾ', ಗಾಂಧಿಗ್ರಾಮ ರಸ್ತೆ
ಜುಹೂ. ಮುಂಬೈ - ೪೦೦ ೦೪೯

ಅರವಿಂದ ನಾಡಕರ್ಣಿ
೧೦೧, ಕೇತಾಯುನ್ ಮ್ಯಾನ್ಶನ್
ಶಹಾಜಿ ರಾಜೇ ಮಾರ್ಗ,
ವಿಲೇಪಾರ್ಲೆ (ಪೂರ್ವ),
ಮುಂಬೈ - ೪೦೦ ೦೫೭

ವಿಜಯಾ ದಬ್ಬೆ
ಅಧ್ಯಾಪಕಿ, ಕನ್ನಡ ಅಧ್ಯಯನ ಸಂಸ್ಥೆ,
ಮೈಸೂರು - ೫೭೦ ೦೦೬

ಡಾ. ಎಸ್. ಎಸ್. ಕುಲಕರ್ಣಿ
ಮುಖ್ಯಸ್ಥರು, ಇಂಗ್ಲಿಷ್ ವಿಭಾಗ,
ಸ್ನಾತಕೋತ್ತರ ಅಧ್ಯಾಪನ ಸಂಶೋಧನ ಕೇಂದ್ರ
ಪಣಜಿ, ಗೋವೆ

ಬಸವರಾಜ ಪಳಕ್ಕಂದ
ಮೆಣಸಿನಕಾಯಿ ಗಲ್ಲಿ,
ಧಾರವಾಡ - ೫೮೦ ೦೦೧

ಡಾ. ಹೇಮಂತ ಕುಲಕರ್ಣಿ
೪೦೨, 'ರಿವೀರಾ', ಗಾಂಧೀಗ್ರಾಮ ರಸ್ತೆ
ಜುಹೂ, ಮುಂಬೈ - ೪೦೦ ೦೪೯

ಸುಮತೀಂದ್ರ ನಾಡಿಗ
೫೨೩, ಪದ್ಮನಾಭನಗರ,
ಬನಶಂಕರಿ ಎರಡನೇ ಹಂತ,
ಬೆಂಗಳೂರು - ೫೬೦ ೦೭೦

ಜಿ. ಎಂ. ಕುಲಕರ್ಣಿ
ರಘೋತ್ತಮ ತೀರ್ಥರ ಮಠದ ಪಕ್ಕ
ಮಹಿಷಿ ರಸ್ತೆ, ಧಾರವಾಡ - ೫೮೦ ೦೦೭

# ಸೃಜನವೇದಿ : ೧

೧೫, ಎಪ್ರಿಲ್ ೧೯೮೪

ವಿ. ಜಿ. ಭಟ್ಟ

ಅರವಿಂದ ನಾಡಕರ್ಣಿ

ವಿಜಯಾ ದಬ್ಬೆ

ಡಾ. ಎಸ್. ಎಸ್. ಕುಲಕರ್ಣಿ

ಬಸವರಾಜ ವಕ್ಕುಂದ

ಡಾ. ಹೇಮಂತ ಕುಲಕರ್ಣಿ

ಸುಮತೀಂದ್ರ ನಾಡಿಗ

ಜಿ. ಎಂ. ಕುಲಕರ್ಣಿ

ಸೃಜನವೇದಿ ಪ್ರಕಾಶನ

೪೦೨, ' ರಿವೀರಾ ', ಗಾಂಧೀ ಗ್ರಾಮ ರಸ್ತೆ
ಜುಹೂ, ಮುಂಬೈ – ೪೦೦ ೦೪೯